ವೀರಶೈವ

# ಕಾವ್ಯೋಕ್ತ ವಚನಸಂಪುಟ





ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ

ಸಮಗ್ರ ವೀರಶೈವ ಅಪ್ರಕಟಿತ ಪ್ರಾಚೀನಸಾಹಿತ್ಯ ಪ್ರಕಟನಾಮಾಲೆ : ೪೧

# ವೀರಶೈವ ಕಾವ್ಯೋಕ್ತ ವಚನಸಂಪುಟ

ಆದರ ಪೂರ್ವಕವಾಗಿ,

ಮೇ.೨೦. 1991

ಪ್ರಕಾಶಕರು
ಗದಗ.

ಸಂಪಾದಕರು :

ಶ್ರೀ ಬಸವರಾಜ ಹೂಗಾರೆ



ಪ್ರಕಾಶಕರು :

ವೀರಶೈವ ಅಧ್ಯಯನ ಸಂಸ್ಥೆ

ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ

ಪ್ರಕಾಶಕರು :

ವೀರಶೈವ ಅಧ್ಯಯನಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ.



ಸಲಹಾ ಸಮಿತಿ :

ಡಾ. ವೀರಣ್ಣ ರಾಜೂರ
ರೀಡರ್, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಡಾ. ಬಿ. ಆರ್. ಹಿರೇಮಠ
ರೀಡರ್, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಶ್ರೀ ಎಸ್. ಶಿವಣ್ಣ
ಸಂಪಾದಕರು, ಹಸ್ತಪ್ರತಿ ವಿಭಾಗ, ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ನಿರ್ದೇಶಕರು :

ಡಾ. ಎಂ. ಎಂ. ಕಲಬುರ್ಗಿ
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

---

ಗ್ರಂಥದಾನ :

ಲಿಂ. ಶ್ರೀ ಬಸನಗೌಡ ಪಾಟೀಲ, ಗದಗ ಇವರ ಸ್ಮರಣಾರ್ಥ,
ಶ್ರೀಮತಿ ರತ್ನಾ ಬಸನಗೌಡ ಪಾಟೀಲ, ಗದಗ

---



ಪ್ರಥಮ ಮುದ್ರಣ : ೧೯೯೧

ಬೆಲೆ : ೨೦-೦೦



ಮುದ್ರಕರು :

ರಾಜಶ್ರೀ ಪ್ರಿಂಟಿಂಗ್ ಪ್ರೆಸ್,
ಧಾರವಾಡ-೫೮೦ ೦೦೧

# ಪ್ರಕಾಶಕರ ನುಡಿ

"ವೀರಶೈವ ಅಧ್ಯಯನಸಂಸ್ಥೆ" ಗದುಗಿನ ಶ್ರೀ ತೋಂಟದಾರ್ಯ ಸಂಸ್ಥಾನ-ಮಠದ ಆಶ್ರಯದಲ್ಲಿ ತಲೆಯೆತ್ತಿರುವ ವೀರಶೈವ ಚಟುವಟಿಕೆಗಳ ಒಂದು ಸಾಂಸ್ಕೃತಿಕ ಕೇಂದ್ರ. ವೀರಶೈವ ಸಂಸ್ಕೃತಿಯ ಸಮಸ್ತಮುಖಗಳ ಅಧ್ಯಯನ-ಪ್ರಕಟಣೆ ಇದರ ಗುರಿ, ಈ ಸಂಸ್ಥೆ ಈ ವರೆಗೆ ಕ್ರಮವತ್ತಾಗಿ ಅನೇಕ ಮಾರ್ಗಗಳಲ್ಲಿ ಮುನ್ನಡೆದಿದೆ. ಅವುಗಳಲ್ಲಿ "ಸಮಗ್ರ ವೀರಶೈವ ಅಪ್ರಕಟಿತ ಪ್ರಾಚೀನಸಾಹಿತ್ಯ ಪ್ರಕಟನಾಯೋಜನೆ"ಯೂ ಒಂದು.

ಪ್ರಾಚೀನ ಕನ್ನಡಸಾಹಿತ್ಯಕ್ಕೆ ಧರ್ಮವೇ ಗುರಿ, ಧರ್ಮವೇ ಗುರು. ಹೀಗಾಗಿ ನಮ್ಮ ವಾಙ್ಮಯ ಜೈನ, ವೀರಶೈವ, ಬ್ರಾಹ್ಮಣ ಧರ್ಮಗಳಿಗೆ ಬರೆದ ಸಾಹಿತ್ಯಿಕ ವ್ಯಾಖ್ಯಾನವಾಗಿದೆ. ಈ ತ್ರಿವೇಣಿಯ ಒಂದು ಭಾಗವಾದ ವೀರಶೈವಸಾಹಿತ್ಯದ ಪ್ರಕಟನೆಯೆಂದರೆ ಪ್ರಾಚೀನ ಕನ್ನಡಸಾಹಿತ್ಯದ ಮೂರರಲ್ಲೊಂದು ಭಾಗದ ಪ್ರಕಟ-ನೆಯೇ ಆಗುವುದರಿಂದ, ಈ ಯೋಜನೆ ವೀರಶೈವ ಪರವೂ ಹೌದು; ಕನ್ನಡ ಪರವೂ ಹೌದು.

ಇತ್ತೀಚಿನ ದಿನಗಳಲ್ಲಿ ಪ್ರಾಚೀನಸಾಹಿತ್ಯದ ಬಗೆಗೆ. ಅದರಲ್ಲಿಯೂ ಅಪ್ರಕಟಿತ ಪ್ರಾಚೀನಸಾಹಿತ್ಯದ ಬಗೆಗೆ ಉಪೇಕ್ಷೆ ಬೆಳೆಯುತ್ತಲಿದೆ. ನಮ್ಮ ಹಿರಿಯರು "ಜನ ಬದುಕ ಬೇಕೆಂದು" ಬಯಸಿ ಬರೆದಿಟ್ಟಿರುವ ಈ ಎಲ್ಲ ಕೃತಿಗಳನ್ನು ಸಾಧ್ಯವಿದ್ದ ಮಟ್ಟಿಗಾದರೂ ಉಳಿಸಿಕೊಳ್ಳುವುದು ಅವರ ಉತ್ತರಾಧಿಕಾರಿಗಳಾದ ನಮ್ಮ ಕರ್ತವ್ಯವಾಗಿದೆ. ಈ ಕರ್ತವ್ಯಪ್ರಜ್ಞೆಯ ಸಾಕಾರರೂಪ "ಸಮಗ್ರ ವೀರಶೈವ ಅಪ್ರಕಟಿತ ಪ್ರಾಚೀನ ಸಾಹಿತ್ಯ ಪ್ರಕಟನಾಯೋಜನೆ."

ಬಹಳ ಜನರಿಗೆ ಪ್ರಾಚೀನ ಶ್ರೇಷ್ಠಕೃತಿಗಳು ಮಾತ್ರ ಪ್ರಕಟವಾಗಬೇಕೆಂಬ ಭಾವನೆಯಿದೆ. ಆದರೆ ಪ್ರತಿಯೊಂದು ಕೃತಿಗೆ ತನ್ನದೇ ಆದ ಬೆಲೆಯಿರುವುದರಿಂದ ಎಲ್ಲ ಗ್ರಂಥಗಳನ್ನು ಪ್ರಕಟಿಸುವುದೇ ಯೋಗ್ಯ ಉಪಕ್ರಮ. ಹೊಸಗನ್ನಡದ ವೋದಯ ಕಾಲದಲ್ಲಿ ಸಾಹಿತ್ಯವನ್ನು ಸೌಂದರ್ಯದೃಷ್ಟಿಯಿಂದ ನೋಡುವ ದೃಷ್ಟಿ ಯಿಮು ಅದರ ಉಳಿವ ಮುಖಗಳಾದ ಸಂಸ್ಕೃತಿ, ಭಾಷೆ, ಛಂದಸ್ಸು, ಸಮಾಜ, ಜನಪದ ಇತ್ಯಾದಿಗಳು ತೀರ ಅಲಕ್ಷಿತವಾಗಿವೆ. ಇದನ್ನು ಮನಗಂಡು ಈ ಯೋಜನೆ ಸಮಸ್ತಕೃತಿಗಳನ್ನು ಪ್ರಕಟಿಸಲು ಮುಂದೆ ಬಂದಿದೆ.

ವೀರಶೈವಸಾಹಿತ್ಯದಲ್ಲಿ ವಚನ, ಕಾವ್ಯಗಳನ್ನು ಬಿಟ್ಟರೆ ಮಿಕ್ಕ ಪ್ರಕಾರಗಳ ಪ್ರಕಟನೆ ಉಪೇಕ್ಷೆಗೆ ಗುರಿಯಾಗಿದೆ. ಸ್ವರವಚನ, ಟೀಕಾಸಾಹಿತ್ಯ, ತತ್ವಸಾಹಿತ್ಯ ಇತ್ಯಾದಿಗಳೆಲ್ಲ ಇನ್ನೂ ಕತ್ತಲಲ್ಲಿ ಕುಳಿತಿವೆ. ಇದೆಲ್ಲವನ್ನು ಒಂದು ವ್ಯವಸ್ಥಿತ ಕ್ರಮದಲ್ಲಿ, ಅಕಾಡೆಮಿಕ್ ಮಟ್ಟದಲ್ಲಿ ಪ್ರಕಟಿಸಲು ಸಿದ್ಧವಾಗಿದೆ, ಈ ಸಂಸ್ಥೆ.

ಇದು ಒಂದೆರಡು ವರ್ಷಗಳಲ್ಲಿ ಒಬ್ಬಿಬ್ಬರು ವಿದ್ವಾಂಸರಿಂದ ಮುಗಿಯುವ ಕೆಲಸವಲ್ಲ. ಹೊಸದೆಲ್ಲ ಹಳತಾಗುತ್ತ ನಡೆದಂತೆ ಅದರ ಬೆನ್ನು ಬಿಡದೆ ಮುನ್ನಡೆಯುವ ಶಾಶ್ವತ ಯೋಜನೆಯಿದು. ಈ ದಿಸೆಯಲ್ಲಿ ಈ ಯೋಜನೆ ಒಂದು ಪಂಥ (School) ವನ್ನೇ ನಿರ್ಮಿಸಿದರೆ ಆಶ್ಚರ್ಯವೇನಲ್ಲ.

ಈ ಕಾವ್ಯಮಾಲಿಕೆಯಲ್ಲಿ ನಾಲ್ವತ್ತೊಂದನೆಯ ಕೃತಿಯಾಗಿ 'ವೀರಶೈವ ಕಾವ್ಯೋಕ್ತ ವಚನಸಂಪುಟ' ಪ್ರಕಟವಾಗುತ್ತಲಿದೆ. ವಚನಸಂಗ್ರಹಗಳಲ್ಲಿ ಇಂದೊಂದು ವಿಶೇಷವಾದ ಕೃತಿ. ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಶರಣರಿಂದ ರಚನೆ-ಗೊಂಡ ವಚನಸಾಹಿತ್ಯ ನಂತರದ ಶತಮಾನಗಳಲ್ಲಿ ವೀರಶೈವ ಕವಿಗಳು, ಆಧ್ಯಾತ್ಮ ಸಾಧಕರು ಮತ್ತು ಶಾಸ್ತ್ರಕಾರರ ಸಾಹಿತ್ಯಿಕ ಚಟುವಟಿಕೆಗಳಿಗೆ ನೀಡಿದ ಪ್ರೇರಣೆ-ಪ್ರಯೋಜನ ಮತ್ತು ಆ ಮೂಲಕ ವಚನಸಾಹಿತ್ಯ,ವೀರಶೈವಧರ್ಮ ಉಳಿದು ಬಂದ ರೀತಿಯನ್ನು ಪ್ರಸ್ತುತ ಕೃತಿ ತಿಳಿಯಪಡಿಸುತ್ತದೆ. ಇದನ್ನು ವಿಶೇಷ ಪರಿಶ್ರಮ ವಹಿಸಿ ಸಮರ್ಥ ರೀತಿಯಿಂದ ಸಂಪಾದಿಸಿಕೊಟ್ಟ ಶ್ರೀ ಬಸವರಾಜ ಹೂಗಾರ ಅವರಿಗೂ, ಲಿಂ. ಶ್ರೀ ಬಸನಗೌಡ ಪಾಟೀಲ ಇವರ ಸ್ಮರಣಾರ್ಥ ಗ್ರಂಥದಾನವನ್ನು ಪೂರೈಸಿದ ಶ್ರೀಮತಿ ರತ್ನಾ ಬಸನಗೌಡ ಪಾಟೀಲ, ಗದಗ, ಅವರಿಗೂ ಈ ಯೋಜನೆಯ ಕರ್ಣಧಾರತ್ವ ವಹಿಸಿರುವ ಸಲಹಾ ಮಂಡಲಿಯ ಸದಸ್ಯರಿಗೂ ಶ್ರೀ ಎಡೆಯೂರ ಸಿದ್ಧಲಿಂಗ ಮಹಾಶಿವಯೋಗಿ ಸಕಲ ಸೌಭಾಗ್ಯವನ್ನು ಕರುಣಿಸಲೆಂದು ಹಾರೈಸುತ್ತೇವೆ.

ಪ್ರಕಾಶಕರು

೧೭-೩-೯೯೧ ವೀರಶೈವ ಅಧ್ಯಯನ ಸಂಸ್ಥೆ

ಯುಗಾದಿ ಪ್ರತಿಪದ ಶ್ರೀ ತೋಂಟದಾರ್ಯ ಸಂಸ್ಥಾನಮಠ, ಗದಗ

# ಪ್ರಸ್ತಾವನೆ

ವೇದಮಂತ್ರಗಳು ಚತುರ್ವೇದಗಳಾಗಿ ವ್ಯವಸ್ಥೆಗೊಂಡು ವೈದಿಕಜೀವನವಿಧಾನ ನೆಲೆಗೊಂಡ ತರುವಾಯ, ವಿಷ್ಣುಪಾರಮ್ಯವನ್ನು ಸಾರುವ ಸ್ಮೃತಿ ಪುರಾಣಾಗ-ಮಾದಿಗಳು ರಚನೆಗೊಂಡವು. ಇವುಗಳ ಧೋರಣೆಯನ್ನೇ ಮುಂದುವರೆಸಿಕೊಂಡು ರಾಮಾಯಣ, ಮಹಾಭಾರತಗಳಂತಹ ರಾಷ್ಟ್ರೀಯಕಾವ್ಯಗಳು ಹುಟ್ಟಿ ಜನಮನದ ಮೇಲೆ ಅಗಾಧ ಪರಿಣಾಮ ಬೀರಿದವು. ವೈದಿಕವಾಙ್ಮಯಗಳಲ್ಲಿ ಸಾರ್ವಕಾಲಿಕ ಮೌಲ್ಯಗಳ ಪ್ರಸಾರದ ಜೊತೆಗೆ ಯಜ್ಞಯಾಗಾದಿಗಳಂತಹ ಆಚರಣೆಗಳು, ಕರ್ಮ ಸಿದ್ಧಾಂತ- ಪುನರ್ಜನ್ಮಸಿದ್ಧಾಂತಹಿನ್ನೆಯಲ್ಲಿ, ಹುಟ್ಟಿನಿಂಗಲೇ ಜಾತಿಯನ್ನು ನಿರ್ಧರಿಸುವ ವರ್ಣಪದ್ಧತಿ, 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂದು ಹೇಳಿ ಪುರುಷ ಪ್ರಾಧಾನ್ಯವನ್ನು ಸಾರುವ ಅಸಮರ್ಪಕ ಸಾಮಾಜಿಕ ವಿಚಾರಧಾರೆಗಳೂ ಪ್ರಚಲಿತ ವಾದವು. ಈ ಕಾರಣಕ್ಕಾಗಿ ಕಾಲಾಂತರದಲ್ಲಿ ಪರಿಷ್ಕರಣ, ಪ್ರತಿಭಟನೆಯ ಧ್ವನಿ ಯುಳ್ಳ ವಿವಿಧ ಸಿದ್ಧಾಂತ-ದರ್ಶನಗಳು, ಮತ-ಧರ್ಮಗಳು, ಶಾಸ್ತ್ರ-ಸಾಹಿತ್ಯಾದಿ ಗಳು ತಲೆದೋರಿದವು; ಪ್ರತಿಭಟನೆಯ ಸ್ಪಷ್ಟರೂಪವೆಂಬತೆ ಜೈನ ಮತ್ತು ಬೌದ್ಧ ಧರ್ಮಗಳು ಸ್ವತಂತ್ರವಾಗಿ ಅಸ್ತಿತ್ವಕ್ಕೆ ಬಂದು ವೈದಿಕಧರ್ಮ ಮತ್ತು ವಾಙ್ಮಯಕ್ಕೆ ದೊಡ್ಡ ಗಂಡಾಂತರವನ್ನು ಒಡ್ಡಿದವು. ಈ ನಿಟ್ಟಿನಲ್ಲಿ ಇನ್ನೂ ವಿಶೇಷ ಗಮನಿಸ ಬೇಕಾದುದು ಹನ್ನೆರಡನೆಯ ಶತಮಾನದಲ್ಲಿ ಕನ್ನಡನಾಡಿನಲ್ಲಿ ಬಸವಾದಿ ಶರಣರಿಂದ ಪ್ರಾರಂಭವಾದ ಆಂದೋಲನ.

ಶರಣರು ವೇದಗಳು ಅಪೌರುಷೇಯವಾದವುಗಳೆಂಬದನ್ನು ಒಪ್ಪಲಿಲ್ಲ. ಅವರು ವೇದಪ್ರಮಾಣವನ್ನು ನಿರಾಕರಿಸಿ ಅನುಭಾವಪ್ರಮಾಣವನ್ನು ಒಪ್ಪಿಕೊಂಡರು. ಶ್ರುತಿ ಸ್ಮೃತಿ, ಪುರಾಣಾಗಮ, ರಾಮಾಯಣ ಮಹಾಭಾರತ-ಒಟ್ಟಾರೆ ವೈದಿಕ ವಾಙ್ಮಯವನ್ನೇ ಕಟುವಾಗಿ ಟೀಕಿಸುತ್ತ, ಅಲ್ಲಿಯ ಕೆಲವು ಉದಾತ್ತ ವಿಚಾರಗಳನ್ನು ಸ್ವೀಕರಿಸಿದರೂ, ಸ್ವಾನುಭಾವದಿಂದ ಸ್ಫೂರ್ತಿಗೊಂಡು ಶಿವಮಯವಾದ ಈ ಬದುಕಿನಲ್ಲಿ ಎಲ್ಲರೂ ಸಮಾನರೆಂಬುದನ್ನು ಸಾರುವ ವಚನವಾಙ್ಮಯವನ್ನು ಸೃಷ್ಟಿಸಿ ಹೊಸ ಚಿಂತನೆಯ ಚಿಲುಮೆಯನ್ನು ಹೊಮ್ಮಿಸಿದರು.

ಅಂತರಂಗಶುದ್ಧಿ, ಅನನ್ಯಶರಣಾಗತಭಕ್ತಿಯೊಂದೆ ಶಿವನೊಲಿಸುವ ಪರಿ-ಯೆಂದು ಸಾರಿ, ಶುಷ್ಕ-ನಿರರ್ಥಕ-ಗೊಡ್ಡು ಆಚರಣೆಗಳಿಗೆ ವಿದಾಯ ಹೇಳಿದರು. ಸ್ತ್ರೀಯರಿಗೆ ಪುರುಷರ ಸಮಾನವಾದ ಧಾರ್ಮಿಕಸ್ವಾತಂತ್ರ ಕೊಟ್ಟು, 'ಕಾಸಿ ಕಮ್ಮಾರ

ನುಡಿದ ಬೇಸಿ ಮಡಿವಾಳನಾದ ವೇದವನೋದಿ ಹಾರುವನಾದ'–ಎಂದು ಸಾರಿ ಜಾತಿ ಪದ್ಧತಿಯ ಪರಿಕಲ್ಪನೆಯನ್ನೇ ಜಾಲಾಡಿದರು. ಬ್ರಾಹ್ಮಣ ಮೊದಲಾಗಿ ಅಂತ್ಯಜ ಕಡೆಯಾಗಿ ಲಿಂಗಭಕ್ತರೆಲ್ಲ ಒಂದೇ ಎಂಬ ಹೊಸ ಧಾರ್ಮಿಕ ಸಮಾಜವಾದದ ಪ್ರತಿಪಾದನೆಯಿಂದ, ಶತಶತಮಾನಗಳಿಂದ ಮುದುಡಿ-ಮುರುಟಿ ಹೋಗಿದ್ದ ಸಮಾಜ ಪುರುಷನ ಅಂಗಾಂಗಗಳಲ್ಲಿ ಹೊಸ ಚೈತನ್ಯವನ್ನು ತುಂಬಿದರು. ಶಿವಶರಣರ ಈ ಧೋರಣೆ ಸಮಾಜದ ಎಲ್ಲ ಸ್ತರಗಳ ಜನಮನವನ್ನು ಸೆರೆಹಿಡಿಯಿತು. ಅವಕಾಶ ವಂಚಿತರಾದ, ನಿರಂತರ ಶೋಷಣೆಯಿಂದ ದಮನಿಸಲ್ಪಟ್ಟಿದ್ದ ಸಮಾಜದ ವಿವಿಧ ಸ್ತರಗಳಿಂದ ಮೇಲೆದ್ದು ಬಂದ ಜನಸಮುದಾಯ ಆತ್ಮವಿಶ್ವಾಸ ಮತ್ತು ಎಚ್ಚರಿಕೆ ಇಂದ ಆಂದೋಲನದಲ್ಲಿ ಪಾಲುಗೊಂಡಿತು; ನೂರಾರು ಶರಣ–ಶರಣೆಯರು ಶ್ರೇಷ್ಠ ವಚನಗಳನ್ನು ರಚಿಸಿದರು. ವೈದಿಕ ವಿಚಾರಗಳ ಹಿನ್ನೆಲೆಯ ಆಧ್ಯಾತ್ಮ ಮತ್ತು ಬದುಕಿನಿಂದ ಭಿನ್ನವಾದ ಆಧ್ಯಾತ್ಮ ಮತ್ತು ಬದುಕಿನ ರೀತಿಯನ್ನು ಶರಣರು ಪರಿಭಾವಿಸಿಕೊಂಡರು. ಶಿವಶರಣರ ವಚನಗಳು ನಂತರದ ಶತಮಾನದ ವೀರಶೈವ ಸಾಹಿತ್ಯಕ್ಕೆ ಸ್ಫೂರ್ತಿ ಮತ್ತು ಆಕರಸಾಮಗ್ರಿಯನ್ನು ಒದಗಿಸಿಕೊಟ್ಟವು. ವೀರಶೈವ ಕವಿಗಳು ವೈದಿಕ ಮೂಲದ ಕಾವ್ಯವಸ್ತು ಮತ್ತು ಕಾವ್ಯದ ಧೋರಣೆಯನ್ನು ತ್ಯಜಿಸಿ, ತಮ್ಮ ಪರಿಸರದ ಪ್ರಭಾವಗಳಿಗೆ ಸ್ಪಂದಿಸುತ್ತ, ತಮ್ಮಪ್ರವೃತ್ತಿಗೆ ಸಹಜವಾದ ಕಾವ್ಯದ ವಸ್ತು ಮತ್ತು !ಧೋರಣೆಗಳನ್ನು ರೂಪಿಸಿಕೊಂಡು 'ಜನ ಒದುಕಲೆಂಬ' ಧೋರಣೆ ಇಂದ ಕಾವ್ಯ ರಚಿಸಿದರು.

ರಾಜಸತ್ತೆಯ ಪ್ರಾಬಲ್ಯದ ಪರಿಸರದಲ್ಲಿ ಪ್ರಜಾಶಕ್ತಿಯಿಂದ ರೂಪುಗೊಂಡ ಕಲ್ಯಾಣ ಕ್ರಾಂತಿಯ ಸಂದರ್ಭದಲ್ಲಿ ಸಂಪ್ರದಾಯ ವಾದಿಗಳ, ಪುರೋಹಿತ ವರ್ಗಗಳ ಕೈಮೇಲಾಗಿ ಬಸವಾದಿ ಶರಣರ ಚಟುವಟಿಕೆಗಳಿಗೆ ವಿರೋಧ ಉದ್ಭವಿಸಿತಾದರೂ ಶರಣರ ವ್ಯಕ್ತಿತ್ವ ಮತ್ತು ತತ್ವಗಳು ಜನಾಂತರಂಗದ ಮೇಲೆ ಅದ್ಭುತ ಅಚ್ಚಳಿಯದ ಪರಿಣಾಮವನ್ನು ಬೀರಿದವು. ಜನಮನವನ್ನು ತಟ್ಟಿ ಎಚ್ಚರಿಸುವುದೇ ಯಾವುದೇ ಚಳುವಳಿಯ,ಆಂದೋಲನದ ನಿಜವಾದ ಗೆಲವು. ಈ ಅರ್ಥದಲ್ಲಿ ಶರಣರ ಆಂದೋಲನ ಅಪೂರ್ವವಾದ ಯಶಸ್ಸನ್ನು ಸಾಧಿಸಿತೆಂದು ಹೇಳಬಹುದು. ನಂತರದ ವೀರಶೈವ ಕವಿಗಳು, ಆಧ್ಯಾತ್ಮ ಸಾಧಕರು, ಶಾಸ್ತ್ರಕಾರರು ಈ ಎಚ್ಚರಿಕೆಯನ್ನು ನಿರಂತರವಾಗಿ ಉಳಿಸಿಕೊಂಡು ಬಂದಿರುವುದನ್ನು ವೀರಶೈವ ಸಾಹಿತ್ಯಚರಿತ್ರೆಯುದ್ದಕ್ಕೂ ಕಾಣುತ್ತೇವೆ.

ಬಸವಕಾಲೀನ ಶರಣರ 'ವಚನಸೃಷ್ಟಿಯುಗ'ದ ನಂತರ ವೀರಶೈವಸಾಹಿತ್ಯ ೧) ಕಾವ್ಯಸೃಷ್ಟಿ, ೨) ವಚನಸಂಪಾದನೆ ೩) ಸ್ವತಂತ್ರ ವಚನಸೃಷ್ಟಿ ಹಾಗೂ ೪) ವೀರಶೈವ ಧರ್ಮದ ಶಾಸ್ತ್ರಕೃತಿಸೃಷ್ಟಿ– ಎಂದು ಸ್ಥೂಲವಿವಾಗಿ ನಾಲ್ಕು

ಪ್ರಕಾರಗಳಲ್ಲಿ ಬೆಳೆದು ಬಂದಿರುವುದನ್ನು ಗುರುತಿಸಬಹುದಾಗಿದೆ. ಹರಿಹರ-ರಾಘವಾಂಕರು ಬಸವಾದಿ ಶರಣರಿಗೆ ಕಾಲದೃಷ್ಟಿಯಿಂದ ಹತ್ತಿರದವರು. ಇವರು ಸಾಂಪ್ರದಾಯಿಕವಾದ ಕಾವ್ಯರಚನೆಯನ್ನು ಬಿಟ್ಟು ಕಾವ್ಯದ ವಸ್ತು-ಭಾಷೆ-ಛಂದಸ್ಸು ಮತ್ತು ಧೋರಣೆಗಳಲ್ಲಿ ಹೊಸಮಾರ್ಗವನೇ ತೆರೆದುಕೊಟ್ಟರು. ಇವರೀರ್ವರೂ ಕನ್ನಡನಾಡಿನಲ್ಲಿ ಆವೇಳೆಗೆ ಜನಮನದಲ್ಲಿ ಆರಾಧ್ಯದೇವರೆಂದು ನೆಲೆಗೊಂಡಿದ್ದ ಬಸವ, ಪ್ರಭುದೇವ. ಮಹಾದೇವಿಯಕ್ಕ, ಸಿದ್ಧರಾಮ-ಮೊದಲಾದ ಶರಣರ ವ್ಯಕ್ತಿತ್ವಕ್ಕೆ ತಲೆಬಾಗಿ ವೀರಶೈವಧರ್ಮದ ಪ್ರಭಾವಲಯವನ್ನು ಪ್ರವೇಶಿಸಿದರು. ಶರಣರ ವಚನ, ಪ್ರಚಲಿತ ಐತಿಹ್ಯ ಮತ್ತು ಸ್ಥಳಪುರಾಣಗಳಿಂದ ವಿಷಯವನ್ನು ಸಂಗ್ರಹಿಸಿಕೊಂಡು ಕಾವ್ಯರಚಿಸಿದರು.

ಇನ್ನು ಬಸವಾದಿ ಶರಣರಲ್ಲಿ ಅಪಾರಭಕ್ತಿ ಯುಳ್ಳವರಾಗಿದ್ದು, ವೀರಶೈವ ಧರ್ಮದಿಂದ ಆತ್ಮೋದ್ಧಾರ ಮತ್ತು ಲೋಕಕಲ್ಯಾಣವನ್ನು ಸಾಧಿಸಿಕೊಂಡ ಆಧ್ಯಾತ್ಮಸಾಧಕ ಗುರು ವಿರಕ್ತರು ಸಮಗ್ರ ವಚನರಾಶಿಯನ್ನು ವಿವಿಧ ರೀತಿಯಲ್ಲಿ ಶಾಸ್ತ್ರದಚೌಕಟ್ಟಿಗೆ ಅಳವಡಿಸುವ ಒಂದು ನವೀನವಾದ ಸಾಹಿತ್ಯಕ ಚಟುವಟಿಕೆಯನ್ನು ಪ್ರಾರಂಭಿಸಿದರು. ಕಲ್ಲುಮಠದ ಪ್ರಭುದೇವ, ಗುಬ್ಬಿಮಲ್ಲಣಾರ್ಯ, ಶೂನ್ಯ ಸಂಪಾದನೆಯ ಕರ್ತೃಗಳು, ತೋಂಟದ ಸಿದ್ಧಲಿಂಗ ಶಿವಯೋಗಿ ಮತ್ತು ಅವರ ನೂರಾರು ಶಿಷ್ಯ-ಪ್ರಶಿಷ್ಯ ಪರಂಪರೆಯವರು ವೀರಶೈವಧರ್ಮದ ಪ್ರಚಾರ ಹಾಗೂ ಪ್ರತಿಷ್ಠಾ-ಪನ ಕಾರ್ಯವನ್ನು ವಚನಗಳ ಸಂಗ್ರಹ, ಸಂಕಲನ, ಸಂಪಾದನೆ, ವ್ಯಾಖ್ಯಾನಗಳಂಥ ಹೊಸ ಹೊಸ ಪ್ರಯೋಗಗನ್ನು ಅದ್ಭುತವಾಗಿ ಮಾಡಿದರು. ಇಂತಹದೇ ಇನ್ನೊಂದು ಪ್ರಯೋಗ ಕಾವ್ಯಗಳ ಒಡಲಲ್ಲಿ ವಚನಗಳನ್ನು ಅಳವಡಿಸುವುದು. ಈ ಕ್ರಿಯೆ, ವಚನಗಳನ್ನೇ ಪದ್ಯಗೊಳಿಸುವುದು ಇಲ್ಲವೆ ಸಂದರ್ಭವನ್ನು ಸಮರ್ಥಿಸುವ ಸೂಕ್ತ ವಚನಗಳನ್ನೇ ಎತ್ತಿಕೊಂಡು ಬಳಸುವುದು. ಇದರಿಂದಾಗಿ ತಮ್ಮ ಹೇಳಿಕೆಯನ್ನು ಪುರಾತನರ ಶಬ್ದಪ್ರಮಾಣದಿಂದ (ವಚನಗಳಿಂದ) ಸಮರ್ಥಿಸುವ ವಿಧಾನ ನಿರ್ಮಾಣ ವಾಯಿತಲ್ಲದೆ ಕಾವ್ಯಶಿಲ್ಪಕ್ಕೆ ರಚನಾ ವೈವಿಧ್ಯವೂ ಪ್ರಾಪ್ತವಾಯಿತು.

ಇಂಥ ವೀರಶೈವ ೧೪ ಕೃತಿಗಳಲ್ಲಿ (೧೦ ಪ್ರಕಟಿತ, ೪ ಅಪ್ರಕಟಿತ) ಬಳಕೆ-ಯಾದ ವಚನಗಳನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

ಬಸವಣ್ಣ, ಪ್ರಭುದೇವ, ಸಿದ್ಧರಾಮ, ಅಕ್ಕಮಹಾದೇವಿ ಮೊದಲಾದ ಶರಣ-ರನ್ನು ಕುರಿತ ಕಾವ್ಯರಚಿಸಿದ ಸಿಂಗಿರಾಜ, ಚಾಮರಸರಂತಹ ಕವಿಗಳು ಹರಿಹರ, ರಾಘವಾಂಕ, ಭೀಮಕವಿ, ಚೆನ್ನಬಸವಾಂಕ ಮೊದಲಾದ ಕವಿಗಳಿಂದ, ವಸ್ತುನಿರ್ವ-ಹಣೆಯ ರೀತಿಯಲ್ಲಿ ಭಿನ್ನರಾಗಿ ನಿಲ್ಲುತ್ತಾರೆ. ಹರಿಹರ ರಾಘವಾಂಕಾದಿಗಳಲ್ಲಿ ಶಿವ-

ಶರಣರ ವಚನಗಳ ನೇರವಾದ ಬಳಕೆಯಿಲ್ಲ. ಅವರ ಕಾವ್ಯಗಳಲ್ಲಿ ವಚನಗಳ ಪರಿಭಾಷೆ ಮತ್ತು ಛಂದೋಬದ್ಧಗೊಳಿಸಿದಂತಿರುವ ಶರಣರ ಅನೇಕ ವಚನಗಳ ರೂಪಗಳನ್ನು ಕಾಣುತ್ತೇವೆ. ಸಿಂಗಿರಾಜ, ಚಾಮರಸರು ತಮ್ಮ ಕಾವ್ಯಗಳಲ್ಲಿ ನೇರವಾಗಿ ಶರಣರ ವಚನಗಳನ್ನು ಬಳಿಸಿಕೊಂಡಿದ್ದಾರೆ. ಸಿಂಗಿರಾಜನು ಕಾವ್ಯದುದ್ದಕ್ಕೂ ಬಸವಣ್ಣನ ವ್ಯಕ್ತಿತ್ವ ಚಿತ್ರಣ, ಸಂದರ್ಭದ ಸ್ಪಷ್ಟತೆಗಾಗಿ, ದರ್ಶನದ ಪ್ರತಿಪಾದನೆಗಾಗಿ–ಒಟ್ಟಾರೆ ಪುರಾಣದ ಪರಿಣಾಮಕತೆಯನ್ನು ಮಾಡಿಸುವಲ್ಲಿ ವಚನಗಳ ಬಳಕೆಯ ಹಿಂದಿರುವ ಉದ್ದೇಶ ಸಾರ್ಥಕವಾಗಿದೆ.

ಪ್ರಭುಲಿಂಗ ಲೀಲೆಯಲ್ಲಿ ಚಾಮರಸ ಪ್ರತಿಯೊಂದು ಗತಿಯ ಪ್ರಾರಂಭದಲ್ಲಿ ಕೆಲವು ವಚನಗಳನ್ನು ಉದ್ಧರಿಸುತ್ತಾನೆ. ನಂತರದ ಕಾವ್ಯಭಾಗ ಈ ಉದ್ಧೃತ ವಚನಗಳ ಒಟ್ಟು ಆಶಯದ ಕಲಾತ್ಮಕವಾದ ಕಾವ್ಯರೂಪದ ವ್ಯಾಖ್ಯಾನದಂತಿದೆ. ಚಾಮರಸನು ವಚನಗಳಲ್ಲಿ ಪ್ರಭುವಿನ ವ್ಯಕ್ತಿತ್ವದರ್ಶನ ಮತ್ತು ಲೋಕೋದ್ಧಾರ ಕಾರ್ಯದ ದರ್ಶನ ಪಡೆದು, ಕಾವ್ಯಮಾಧ್ಯಮದಲ್ಲಿ ಅದನ್ನು ಪಡಿಮೂಡಿಸಿರುವ ಅವನ ಕಾವ್ಯಪ್ರತಿಭೆ, ಪ್ರಭುಭಕ್ತಿ ಅನನ್ಯವಾದುದಾಗಿದೆ. ಪ್ರಭುಲಿಂಗಲೀಲೆಯಲ್ಲಿಯ ಎಲ್ಲ ವಚನಗಳನ್ನು ಸಂಗ್ರಹಿಸಿ ರೂಪಿಸಿದ 'ಪ್ರಭುಲಿಂಗಲೀಲೆಯ ವಚನಗಳು' (ಕನ್ನಡ ಅಧ್ಯಯನ ಪೀಠ ಹ.ಪ್ರ. ೧೨೫೭) ಹೆಸರಿನ ಹಸ್ತಪ್ರತಿಯೊಂದು ಸಿಗುವುದು ಗಮನಿಸತಕ್ಕ ಸಂಗತಿಯಾಗಿದೆ. ನಮ್ಮಂತೆಯೇ ಕಾವ್ಯೋಕ್ತ ವಚನಗಳನ್ನು ಸಂಗ್ರಹಿಸುವ ಕೆಲಸ ಈ ಹಿಂದೆಯೇ ನಡೆದಿದ್ದಿತೆಂದು ಸ್ಪಷ್ಟವಾಗಿ, ನಾವು ಸರಿಯಾದ ದಾರಿಯಲ್ಲಿದ್ದೇವೆಂದೆನಿಸುತ್ತಿದೆ.

ಶಾಂತಲಿಂಗದೇಶಿಕನ 'ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ'ವು ಬಸವಾದಿ ಶಿವಶರಣರ ಮತ್ತು ಭರತಖಂಡದ ಎಲ್ಲ ಶಿವಭಕ್ತರ ಚರಿತ್ರೆಯನ್ನೊಳಗೊಂಡ ಗದ್ಯ, ಪದ್ಯ, ಗದ್ಯ–ಪದ್ಯಮಯವಾದ ಶೈಲಿಯಲ್ಲಿ ನಿರೂಪಿಸಿದ ಶಿವಭಕ್ತರ ಬೃಹತ್ ಕಥಾಕೋಶವಾಗಿದೆ. ನೂರಾರು ಚಿಕ್ಕ ಚಿಕ್ಕ ಕಥೆಗಳು ಇಲ್ಲಿದ್ದು, ಪ್ರತಿಯೊಬ್ಬ ಶಿವಭಕ್ತರ ವ್ಯಕ್ತಿತ್ವ ವಿಶೇಷತೆಯನ್ನು ಅವರವರ ಮಾತು, ವಚನ, ಪರಿಭಾಷೆಗಳಲ್ಲಿಯೇ ಕೊಟ್ಟಿರುವುದು ವೈಶಿಷ್ಟ್ಯಪೂರ್ಣವಾಗಿದೆ.

'ಮಹಾದೇವಿಯಕ್ಕನ ಸಾಂಗತ್ಯ', 'ಮೇದಾರ ಕೇತಯ್ಯಗಳ ಸಾಂಗತ್ಯ', ಗಳಂತಹ ಕೃತಿಗಳಲ್ಲಿ ಸಂದರ್ಭಾನುಸಾರಿಯಾಗಿ ಆ ಆ ಶರಣರ ಒಂದೆರಡು ವಚನಗಳು ಬರುತ್ತವೆ. 'ವೀರಶೈವ ಶಿಖಾರತ್ನ', 'ಶಿವಾಧಿಕ್ಯ ಪುರಾಣ'ಗಳಂಥ ಕಾವ್ಯಗಳಲ್ಲಿ ಶಿವಶರಣರ ಚರಿತ್ರೆಯೊಂದಿಗೆ ವೇದಾಗಮ ಪುರಾಣೇತಿಹಾಸಗಳ ಹಿನ್ನೆಲೆಯಲ್ಲಿ

ಹರಪಾರಮ್ಯವನ್ನು ಸೈದ್ಧಾಂತಿಕವಾಗಿ ಪ್ರತಿಪಾದಿಸಲಾಗಿದೆ. ಆಗ ಶಾಸ್ತ್ರನಿರೂಪಣೆಯ ಅಂಥ ವಚನಗಳನ್ನೇ ಉದಾಹರಿಸಲಾಗಿದೆ.

'ಬೊಮ್ಮಲಿಂಗನ ಕಾವ್ಯ'ದಲ್ಲಿ (ರೇವಣಯ್ಯ ಸ್ವಾಮಿ)'ತ್ರ್ಯಲೋಚನ ಮನೋಹರ ಮಾಣಿಕೇಶ್ವರಲಿಂಗ' ಅಂಕಿತದ ಮತ್ತು 'ಕುಸ್ತಿ ಆಗಮ'. 'ಜಂಗಮ ಚಾರಿತ್ರ' ಕಾವ್ಯಗಳಲ್ಲಿ 'ಜಂಗಮಲಿಂಗ ಪ್ರಭುವೆ' ಅಂಕಿತದ ಅಜ್ಞಾತ ವಚನಕಾರನ ವಚನಗಳು ಬಳಕೆಯಾಗಿವೆ.

ಈ ಸಂಪುಟದಲ್ಲಿ ಬರುವ ವಚನಗಳು ಸಂದರ್ಭದಿಂದ ಬೇರ್ಪಡಿಸಿದವುಗಳಾಗಿದ್ದು, ಮೂಲ ಕಾವ್ಯಗಳನ್ನು ಓದಿದರೆ ಮಾತ್ರ ಕಾವ್ಯಗಳಲ್ಲಿ ವಚನಗಳ ಬಳಕೆಯ ಹಿಂದಿರುವ ಉದ್ದೇಶ ಮತ್ತು ಮಹತ್ವ ಸ್ಪಷ್ಟವಾಗುತ್ತದೆ.

ಪ್ರಕಟಿತ ಮತ್ತು ಅಪ್ರಕಟಿತ ಕಾವ್ಯಗಳಲ್ಲಿಯ ವಚನಗಳನ್ನು ಅಲ್ಲಲ್ಲಿ ಸೂಕ್ತ ಪರಿಷ್ಕರಣದೊಂದಿಗೆ ಇಲ್ಲಿ ಸ್ವೀಕರಿಸಿದ್ದೇವೆ. ಈ ಪ್ರಯತ್ನದ ಫಲವಾಗಿ ಈ ಕೃತಿಯಲ್ಲಿ ೨೩ ಜನ ಶರಣರ ೩೧೫ ವಚನಗಳನ್ನು ಸಂಗ್ರಹಿಸಿದಂತಾಗಿದೆ. ಕೆಲವು ವರುಷಗಳ ಹಿಂದೆಯೇ ನಾನು ರೂಪಿಸಿದ್ದ ಪ್ರಸ್ತುತ ವಚನ ಸಂಪುಟವನ್ನು ವೀರಶೈವ ಅಧ್ಯಯನ ಸಂಸ್ಥೆಯ ಸಮಗ್ರ ವೀರಶೈವ ಅಪ್ರಕಟಿತ ಪ್ರಾಚೀನ ಸಾಹಿತ್ಯ ಪ್ರಕಟನ ಮಾಲೆಯಲ್ಲಿ ಪ್ರಕಟಗೊಳ್ಳಲು ಅವಕಾಶಮಾಡಿಕೊಟ್ಟ ಪೂಜ್ಯ ಜಗದ್ಗುರು ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರಿಗೆ ನನ್ನ ಭಕ್ತಿಪೂರಕ ಶರಣಾರ್ಥಿ. ಈ ಗ್ರಂಥದ ಸಂಪಾದನಾ ಕಾರ್ಯವನ್ನು ಒಪ್ಪಿಸಿ,ವಿಷಯಸಂಗ್ರಹಣೆಗೆ ರೂಪುರೇಷೆ ಹಾಕಿಕೊಟ್ಟು ಪ್ರೋತ್ಸಾಹಿಸಿದ ಗುರುಗಳಾದ ಡಾ. ಎಂ. ಎಂ. ಕಲಬುರ್ಗಿಯವರಿಗೆ ಗೌರವಪೂರಕ ನಮಸ್ಕಾರಗಳು. ಗ್ರಂಥಪರಿಷ್ಕರಣದ ಸಂದರ್ಭದಲ್ಲಿ ಉಂಟಾದ ಸಂಶಯಗಳನ್ನು ನಿವಾರಿಸಿಕೊಳ್ಳಲು ಸದಾ ನನಗೆ ಮಾರ್ಗದರ್ಶನ ನೀಡಿದ ಡಾ. ವೀರಣ್ಣ ರಾಜೂರ ಅವರಿಗೆ, ಕೆಲವು ಅಪ್ರಕಟಿತ ಕಾವ್ಯಗಳ ಹಸ್ತಪ್ರತಿಗಳನ್ನು ದೊರಕಿಸಿಕೊಟ್ಟು ಉಪಕರಿಸಿದ ಡಾ. ಬಿ. ಆರ್. ಹಿರೇಮಠ ಅವರಿಗೂ ನನ್ನ ಅನಂತ ಕೃತಜ್ಞತೆಗಳು. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಾಂಡಾರದ ಹಸ್ತಪ್ರತಿಗಳನ್ನು ಉಪಯೋಗಿಸಿಕೊಳ್ಳಲು ಸಮ್ಮತಿಸಿದ ಅಧ್ಯಯನ ಪೀಠದ ಅಧ್ಯಕ್ಷರಿಗೂ, ಅಲ್ಪವೇಳೆಯಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ರಾಜಶ್ರೀ ಪ್ರೆಸ್ಸಿನ ಮಾಲಕರೂ ನನ್ನ ಕೃತಜ್ಞತೆಗಳು.

ಕನ್ನಡ ಅಧ್ಯಯನಪೀಠ, ಬಸವರಾಜ ಹೂಗಾರ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

# ಪರಿವಿಡಿ

# ಸಿಂಗಿರಾಜಪುರಾಣ

---

೧

ನಿರಾಳ ನಿರ್ಮಾಯನಾಗಿ, ಆಕಾರ ನಿರಾಕಾರವಿಲ್ಲದಂದು,
ಸಾಕ್ಷಾತ್ಸಭೆಯಿಲ್ಲದಂದು;
ಆಧಾರದೊಳಗಣ ವಿಭೂತಿಯಂ ತೆಗೆದು ಧರೆಯ ನೆಲೆಗೊಳಿಸಿ,
ಪಂಚಾಶತಕೋಟಿಭೂಮಂಡಲವನ್ನು ಸುತ್ತಿಹರಿಸಿದೆ
ಸಪ್ತಸಾಗರಂಗಳ,
ಎಂಬತ್ತಾರುಕೋಟಿಯು ತೊಂಬತ್ತಾರುಲಕ್ಷ ಕಾಲ ಭುವನಕ್ಕೆ
ಅರುವತ್ತಾರುಕೋಟಿಯೋಜನದುದಯದಲ್ಲಿ
ವಠಖೇಚರ ಭೂಚರದಲ್ಲಿ
ನಿಲಿಸಿದನೀರೇಳುಭುವನಂಗಳ; ತಾರತಮಂಥವುಂಟೆಂದಡೆ,
ಬೆಳಗಿ ತೋರಿದ ಹನ್ನೆರಡು ಜ್ಯೋತಿಯ, ಯೋಜನ ಭೋಜನದಲ್ಲಿ
ಹುಟ್ಟಿದ ಭಾಜನವಾದ ಬೊಬ್ಬುಳಿಯಾದ, ಜಗದಜಂಗುಳಿಯ ಕಾವ
ಗೋವ ತಾನಾಗಿ, ಚತುರಾಶೀತಿಲಕ್ಷಯೋನಿಮುಖ ಜೀವರಾಶಿಗಳಿಗೆ
ರಾಶಿವಾಳುಕ ತಾನಾಗಿ, ಸಕಲ ಅಳಿವು ಉಳಿವಿನೊಳಗೆ ಒಬ್ಬನೆ
ಉಳಿದಿರ್ದು, ನೋಡಿ ಕಂಡು ನಿಂದ ಪೂರ್ವಾಚಾರಿ ಗುಹೇಶ್ವರನ ಶರಣ
ಸಂಗನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆ.

(ಸಂ. ೨, ವ. ೧.)

೨

ಅಯ್ಯಾ, ನೀನು ನಿರಾಕಾರನಾಗಿದ್ದಲ್ಲಿ
ನಾನು ಜ್ಞಾನವೆಂಬ ವಾಹನವಾಗಿರ್ದೆನಯ್ಯಾ.
ನೀನು ಏಕಪಾದದಲ್ಲಿ ಅಂಗುಷ್ಠಾಗ್ರವನೂರಿ ನಾಟ್ಯವನಾಡುವಲ್ಲಿ
ನಾನು ಆಧಾರವೆಂಬ ವಾಹನವಾಗಿರ್ದೆನಯ್ಯಾ.
ನೀನು ತ್ರಿಪುರಸಂಹಾರಮಾಡುವಲ್ಲಿ
ನಾನು ವೃಷಭನೆಂಬ ವಾಹನವಾಗಿರ್ದೆನಯ್ಯಾ.
ನೀನು ಜಂಗಮವಾಗಿ ಭುವನಕ್ಕೆ ಬಂದೊಡೆ
ನಾನು ಭಕ್ತನೆಂಬ ವಾಹನವಾಗಿರ್ದೆನಯ್ಯಾ.
ಇಂತೀ ನಾಲ್ಕುಭವ ನಿನಗಾದವು.
ಎನ್ನ ನೀನೆಂತರಿಯೆ ಕೂಡಲಸಂಗಮದೇವಾ ?

(ಸಂ. ೨, ವ. ೨)

೩

ಅಯ್ಯಾ, ಎತ್ತಿದ ಮಾಣಿಕ್ಯದ ಮಣಿಮಕುಟದ ಮೇಲಣ ಪಡೆಕೋಟಿ,
ಶಿವನಿರ್ಪ ನೆಲೆಯನರಿಯರು.
ಅಯ್ಯಾ, ಇಕ್ಕಿದ ಕರೋಟಿಯ ಮಾಲೆಯೊಳಗಿರ್ಪ
ರುದ್ರಕೋಟಿಗಳು ಶಿವನಿರ್ಪ ನೆಲೆಯನರಿಯರು.
ಅಯ್ಯಾ, ಇಕ್ಕಿದ ರುಂಡಮಾಲೆಯೊಳಗಿರ್ಪ
ರುಂಡಧಾರಿಗಳು ಕೋಟಿ ಶಿವನಿರ್ಪ ನೆಲೆಯನರಿಯರು.
ಅಯ್ಯಾ, ಗಂಗೆ, ಗೌರಿ, ಭೃಂಗಿ ಮೊದಲಾಗಿ
ಶಿವನಿರ್ಪ ನೆಲೆಯನರಿಯರು.
ಅಯ್ಯಾ, ಉಟ್ಟ ಗಜಚರ್ಮದೊಳಗಿರ್ಪ ಋಷಿಗಳು ಕೋಟಿ
ಶಿವನಿರ್ಪ ನೆಲೆಯನರಿಯರು.
ಅಯ್ಯಾ, ಖಟ್ವಾಂಗದೊಳಗಿರ್ಪ ಮನುಮುನಿಗಳು
ಶಿವನಿರ್ಪ ನೆಲೆಯನರಿಯರು.
ಗುಹೇಶ್ವರನೇ, ನಿಮ್ಮ ಶರಣ ಸಂಗನಬಸವಣ್ಣನೆ ಬಲ್ಲ!

(ಸಂ. ೨, ವ. ೩

೪

ಅಯ್ಯಾ, ನೀನು ಕರುಣಿಸಿದ ಏಳುಭವಾಂತರದಲ್ಲಿ
ಶಿವಭಕ್ತನಾಗಿ ಬಾರದಿರ್ದಡೆ ನಿಮ್ಮಾಣೆ; ನಿಮ್ಮ ಪ್ರಮಥರಾಣೆ!
ನಿಮ್ಮ ಪಾದೋದಕಪ್ರಸಾದಕ್ಕಲ್ಲದೆ ಬಾಯ್ದೆರೆಯೆನಯ್ಯಾ!
ಅಯ್ಯಾ, ನಿಮ್ಮ ಪ್ರಥಮಭವಾಂತರದಲ್ಲಿ
ಶಿಲಾದನ ಮಗ ನಂದಿಕೇಶ್ವರನೆಂದು ಹೆಸರಿಟ್ಟು
ನಿಮ್ಮ ಆನಂದದಲ್ಲೆನ್ನನಿರಿಸಿಕೊಂಡಿದ್ದಿರಿ.
ಅಯ್ಯಾ, ಎರಡನೆಯ ಭವಾಂತರದಲ್ಲಿ
ಸ್ಕಂದನೆಂಬ ಗಣೇಶ್ವರನೆಂದು ಹೆಸರಿಟ್ಟುಕರೆದು
ನಿಮ್ಮ ಕಾರುಣ್ಯವ ಮಾಡಿಯೆನ್ನನಿರಿಸಿಕೊಂಡಿದ್ದಿರಿ.
ಅಯ್ಯಾ, ಮೂರನೆಯ ಭವಾಂತರದಲ್ಲಿ
ನೀಲಲೋಹಿತನೆಂಬ ಗಣೇಶ್ವರನೆಂದು ಹೆಸರಿಟ್ಟು
ನಿಮ್ಮ ಲೀಲಾವಿನೋದದಲ್ಲೆನ್ನನಿರಿಸಿಕೊಂಡಿದ್ದಿರಯ್ಯಾ.
ಅಯ್ಯಾ, ನಾಲ್ಕನೆಯ ಭವಾಂತರದಲ್ಲಿ
ಕಾಲನೆಂಬ ಗಣೇಶ್ವರನೆಂದು ಹೆಸರಿಟ್ಟು ಇರಿಸಿಕೊಂಡಿದ್ದಿರಿ.
ಅಯ್ಯಾ, ಐದನೆಯ ಭವಾಂತರದಲ್ಲಿ
ಮನೋಹರನೆಂಬ ಗಣೇಶ್ವರನೆಂದು ಹೆಸರಿಟ್ಟು
ನಿಮ್ಮ ಮನಃಪ್ರೇರಕನಾಗಿ ಎನ್ನನಿರಿಸಿಕೊಂಡಿದ್ದಿರಯ್ಯಾ.
ಅಯ್ಯಾ, ಆರನೆಯ ಭವಾಂತರದಲ್ಲಿ ವೃಷಭಗಣೇಶ್ವರನೆಂದು ಹೆಸರಿಟ್ಟು
ನಿಮಗೆ ವಾಹನವ ಮಾಡಿ ಎನ್ನನಿರಿಸಿಕೊಂಡಿದ್ದಿರಿ.
ಅಯ್ಯಾ, ಏಳನೆಯ ಭವಾಂತರದಲ್ಲಿ
ಬಸವನೆಂಬ ಗಣೇಶ್ವರನೆಂದು ಹೆಸರಿಟ್ಟು ನಿಮ್ಮ ಒಕ್ಕುಮಿಕ್ಕುದಕ್ಕೆ
ಎನ್ನ ಯೋಗ್ಯನಮಾಡಿ ಎನ್ನನಿರಿಸಿಕೊಂಡಿದ್ದಿರಿ.
ಇದು ಕಾರಣ, ಮಹಾದಾನಿಕೂಡಲಸಂಗಮದೇವಾ,
ನೀವು ಕರುಣಿಸಿದ ಭವಾಂತರದಲ್ಲಿ ನಾನು ಬರುತ್ತಿರ್ದೆನಯ್ಯಾ.

(ಸಂ. ೨, ವ. ೪)

೫

ಆದಿಯಾಧಾರವಂ ಮಾಡಿ, ಅಜಕೋಟಿಬ್ರಹ್ಮಾಂಡಂಗಳಂ ಮಾಡಿ,
ಯುಗಜುಗಾದಿಗಳಂ ಮಾಡಿ, ಹರ ಲೀಲೆಯಾಡುವಲ್ಲಿ,
ಹರಿವಿರಿಂಚಿಗಳ ಸುರಾಸುರರ ಶಿರಮಾಲೆಗಳನಿಕ್ಕಿ ಕುಣಿದಾಡುವಲ್ಲಿ,

ಪಾದ ರಸಾತಳಕ್ಕಿಳಿದು ಭುವನ ಜಲಮಯವಾದಲ್ಲಿ
ಹಸ್ತ ಮಕುಟ ತಾಗಿ ಸಕಲಲೋಕಂಗಳು ನಿರವಯವಾದಲ್ಲಿ,
ನಿಜ ಬೆಳಗಿನೊಳಗೆ ಒಮ್ಮೆ 'ಸೋಹಂ' ಎನಲು,
ವಿಚಾರದಿಂದ ಘನಮನವಾದಂದು, ವೃಷಭಾವತಾರವಾದಂದು,
ಗುಹೇಶ್ವರಾ, ನೀನೆ ಲಿಂಗ, ಸಂಗನಬಸವಣ್ಣನೇ ಭಕ್ತನು.

(ಸಂ. ೨. ವ. ೫)

೬

[1]ಕಾಳಿಯ ಕಣ್ ಕಾಣದಿಂದ[1] ಮುನ್ನ, ತ್ರಿಪುರಸಂಹಾರದಿಂದ ಮುನ್ನ,
ಉಮಾಕಲ್ಯಾಣದಿಂದ ಮುನ್ನ, ಹರಿವಿರಿಂಚಿಗಳಿಂದ ಮುನ್ನ,
ಆಳು ನಾನು ಆಳ್ದ ನೀನು ಕೂಡಲಸಂಗಮದೇವಾ.

(ಸಂ. ೨, ವ. ೬)

೭

ಆದಿಯಾಧಾರವಿಲ್ಲದಂದು, ಹಮ್ಮುಬಿಮ್ಮುಗಳಿಲ್ಲದಂದು,
ಸುರಾಳನಿರಾಳವಿಲ್ಲದಂದು,
ಸಚರಾಚರವೆಲ್ಲಾ ರಚನೆಗೆ ಬಾರದಂದು,
ಗುಹೇಶ್ವರಾ. ನೀನೇ ಲಿಂಗ, ಸಂಗನಬಸವಣ್ಣನೇ ಭಕ್ತನು.

(ಸಂ. ೨, ವ. ೭)

೮

ಕೃತಯುಗದಲ್ಲಿ ದೇವರು ದೇವಾಸುರನ ಕೊಲ್ಲುವಲ್ಲಿ
ಪ್ರಥಮನೆಂಬ ಗಣೇಶ್ವರ ತಾನಾಗಿರ್ದ.
ಗಜಾಸುರನ ಚರ್ಮವ ಬಿಚ್ಚಿ ಅಜಾರಿಸಿ ಹೊರುವಲ್ಲಿ
ಉಗ್ರನೆಂಬ ಗಣೇಶ್ವರ ತಾನಾಗಿರ್ದ.
ಅಸುರರ ಶಿರವ ಕೊರಳಲ್ಲಿ, ಉರದಲ್ಲಿ ಶೃಂಗಾರವ ಮಾಡಿಕೊಂಡು
ಜಗಕ್ಕೆ ಜೂಬಾಗಿರ್ಪಲ್ಲಿ ಶಂಕೆಯಿಲ್ಲದ ನಿಶ್ಶಂಕನೆಂಬ
ಗಣೇಶ್ವರ ತಾನಾಗಿರ್ದ.

---

೧-೧ ಕಾಳಿಂಗನ ಕಂಕಣದಿಂದ (ಮೂಲ)

ನರರು ಸುರರು ಹರಿವಿರಿಂಚಾದಿಗಳು ಮೊದಲಾಗಿ
ಕರ್ಮದ ಕಡಲಲ್ಲಿ ಹೊಗುತಿಪ್ಪಲ್ಲಿ ಪರಿಹರಿಸಿದ
ಪರಮನೆಂಬ ಗಣೇಶ್ವರ ತಾನಾಗಿರ್ದ.
ತ್ರೇತಾಯುಗದಲ್ಲಿ ತೆತ್ತಿಗನಾಗಿರುತೆ ಬಿನ್ನವಿಸುತಿಪ್ಪಲ್ಲಿ
ಶಿವಂಗೆ ಕಾಲಾಗ್ನಿರುದ್ರನೆಂಬ ಗಣೇಶ್ವರ ತಾನಾಗಿರ್ದ.
ಜಲಪ್ರಳಯದಲ್ಲಿ ಜಗನ್ನಾಥನಾಗಿಪ್ಪಲ್ಲಿ
ಜರಾಮರಣರಹಿತ ಶರಣ ತಾನಾಗಿರ್ದ.
ಧರೆಗೆ ಶೂನ್ಯಶರಣ ತಾನೊಬ್ಬನೇ ಎಂದಡೆ
ಒಂದನಂತವ ಹುಟ್ಟಿಸುವೆನೆಂದು ಗೂಳಿತಾನಾಗಿರ್ದ.
ಹೋರಿಯಾಗಿದ್ದಲ್ಲಿ ಹೋರಿಯಾಡಿಸಿದನಯ್ಯಾ.
ಸುರರ ದೈತ್ಯಾಳಿಗಳ ತೊತ್ತಳದುಳಿದು ಒಕ್ಕಲಿಕ್ಕಿಯೆ ಕೊಂದು
ಮಿಕ್ಕ ಗಣೇಶ್ವರನೆಂದೆನಿಸಿ, ಉರಿಗಣ್ಣನೇ ತೆರೆದೊಡೆ,
ಈರೇಳು ಲೋಕಗಳು ಉರಿದಾವೆಂದು ಜಗವ ಹಿಂದಿಕ್ಕಿಕೊಂಡು
ವಂದ್ಯನೆಂಬ ಗಣೇಶ್ವರ ತಾನಾಗಿರ್ದ.
ಸಿಂಸಾಸುರನ ಕೊಲ್ಲುವಲ್ಲಿ ವಂಧಾಸುರನೆಂಬ ಗಣೇಶ್ವರ ತಾನಾಗಿರ್ದ.
ತಾಳಾಸುರನ ಕೊಲ್ಲುವಲ್ಲಿ ಪೊಡವಿಬ್ರಹ್ಮಾಂಡ ತಾಳವಗೂಡುವಲ್ಲಿ
ತಾಳಮೇಳ ಗಣೇಶ್ವರ ತಾನಾಗಿರ್ದ.
ಜಾಳಾಂಧರನ ಕೊಲ್ಲುವಲ್ಲಿ ಜಾಣರಿಗೆ ಜಾಣ
ವಿಚಿತ್ರನೆಂಬ ಗಣೇಶ್ವರ ತಾನಾಗಿರ್ದ.
ಪೀತಾಸುರನ ಕೊಲ್ಲುವಲ್ಲಿ ಋತಪನೆಂಬ ಗಣೇಶ್ವರ ತಾನಾಗಿರ್ದ.
ಉಮೆಯು ದಕ್ಷಯಾಗವ ಕೆಡಿಸುವಲ್ಲಿ
ವೀರಭದ್ರನೆಂಬ ಗಣೇಶ್ವರ ತಾನಾಗಿರ್ದ.
ನರಸಿಂಹನ ಶಿರಚ್ಛೇದವಮಾಡುವಲ್ಲಿ
ಶರಭನೆಂಬ ಗಣೇಶ್ವರ ತಾನಾಗಿರ್ದ.
ತ್ರಿಪುರಸಂಹಾರದಲ್ಲಿ ಸ್ಕಂದನೆಂಬ ಗಣೇಶ್ವರ ತಾನಾಗಿರ್ದ.
ಉಮೆಯ ಕಲ್ಯಾಣದಲ್ಲಿ ಕಾಲನೆಂಬ ಗಣೇಶ್ವರ ತಾನಾಗಿರ್ದ.
ಬ್ರಹ್ಮಕಪಾಲ ವಿಷ್ಣುಕಂಕಾಳಶಿರಗಳ ಮುರಿದು ಕೊಂಡಾಡುವಲ್ಲಿ
ನೀಲಕಂಠನೆಂಬ ಗಣೇಶ್ವರ ತಾನಾಗಿರ್ದ.
ದ್ವಾಪರದಲ್ಲಿ ಪ್ರಾಣಲಿಂಗಸಂಯೋಗದಲ್ಲಿ
ವೃಷಭನೆಂಬ ಗಣೇಶ್ವರ ತಾನಾಗಿರ್ದ.
ಇಂತು ನಾಲ್ಕುಯುಗ ಹದಿನೆಂಟುಜುಗ ಲಿಂಗದ ಬಳಿವಳಿಯಲ್ಲಿ

ಬರುತ್ತಿಪ್ಪಲ್ಲಿ ನಂದಿನಾಥನೆಂಬ ಗಣೇಶ್ವರ ತಾನಾಗಿರ್ದ.
ಜಂಗಮಪ್ರಸಾದದ ಪೂರ್ವಾಶ್ರಯವನೆ ಕಳೆದು, ಈ ಕಲಿಯುಗದಲ್ಲಿ
ಲಿಂಗದ ಆದಿಸ್ಥಲವನರಿದ ಕೂಡಲಚೆನ್ನಸಂಗಯ್ಯನ ಮಹಾಮನೆಯಲ್ಲಿ
ಮಂಗಳಾಚಾರಿ ಬಸವಣ್ಣನೊಬ್ಬನೇ. (ಸಂ. ೨, ವ. ೮)

೯

ದಾಯೆಂದಡೆ ನಡೆದು, ಹೋಯೆಂದಡೆ ನಿಲ್ಲನೆ ?
ಜಗವ ಹೊರೆಯಲೆಂದು ಆತನ ಸಾಹಸವ ಬೆಸಗೊಂಬಡೆ
ಈಶ್ವರನ ತಾಳುವನಯ್ಯ.
ಆವರಿಸಿದಡಲ್ಲಾಡಿದಡೆ ಕೈಲಾಸವು ಅಲ್ಲಾಡದೆ ?
ಗಂಡುಗೆದರಿ ಈಡಾಡಿದರೆ ಅಂಡಬ್ರಹ್ಮಾಂಡಂಗಳು ನಿಲುವವೆ ?
ಕೆಲೆದು ಕೆದರಿ ಅಟ್ಟಿದೊಡೆ ಮೊರೆಯೆಂಬರಲ್ಲದೆ
ಇದಿರಾನುವರುಂಟೆ ?
ಅಯ್ಯಾ, ನೀನು ಬಿಟ್ಟು ಬೀದಿವರಿದೋಡೆ ಅಟ್ಟಿ ಹಿಡಿವ
ಗಂಡುಗರ ನಾ ಕಾಣೆನಯ್ಯ;
ಸೃಷ್ಟಿಗೀಶ್ವರನಲ್ಲದೆ ಮತ್ತಾರೂ ಇಲ್ಲ.
ಗಂಭೀರವೆಂದಡೆ ಇಂಬುಗೊಳ್ಳವೆ ಕೊಳಗು ?
ಶಂಭುವೇರುವ ವಾಹನವೆಂದೊಡೆ ಬೆನ್ನು ಬೆಂಕಟ್ಟಾಗದೆ ?
ಈರೇಳು ಭುವನಕ್ಕೆ ನಮ್ಮ ಕೂಡಲ[ಚೆನ್ನ]ಸಂಗಮದೇವನಲ್ಲಿ
ಕೆತ್ತೀಸಾದಿಗಳಿಗುಬ್ಬಸವಯ್ಯ ಎಮ್ಮ ಬಸವರಾಜನು.
(ಸಂ. ೨, ವ. ೯)

೧೦

[1]ಕೃತಯುಗದಲ್ಲಿ ಓಂಕಾರಸತ್ಯರೂಪ ದೇವಾಂಗನೆಂಬ ಭಕ್ತನ ಮಾಡುವಲ್ಲಿ
ಸ್ಥೂಲಕಾಯನೆಂಬ ಜಂಗಮ,
ಅಂದಿಗೆ ಪ್ರಥಮ ಮೂಲಸ್ಥಾನ ಕೇತಾರೇಶ್ವರ.
ತ್ರೇತಾಯುಗದಲ್ಲಿ ಘಂಟಾಕರ್ಣನೆಂಬ ಭಕ್ತನ ಮಾಡುವಲ್ಲಿ
ಶೂನ್ಯಕಾಯನೆಂಬ ಜಂಗಮ,
ಅಂದಿಗೆ ಪ್ರಥಮ ಮೂಲಸ್ಥಾನ ರಾಮೇಶ್ವರ.
ದ್ವಾಪರದಲ್ಲಿ ವೃಷಭನೆಂಬ ಭಕ್ತನ ಮಾಡುವಲ್ಲಿ
ಅನಿಮಿಷನೆಂಬ ಜಂಗಮ,
ಅಂದಿಗೆ ಪ್ರಥಮ ಮೂಲಸ್ಥಾನ ಸೌರಾಷ್ಟ್ರ.

---

೧ + ಅಂದು ದುಂದುಮಾಕಾಲ (ಮೂ)

ಕಲಿಯುಗದಲ್ಲಿ ಬಸವನೆಂಬ ಭಕ್ತನಮಾಡುವಲ್ಲಿ
ಪ್ರಭುವೆಂಬ ಜಂಗಮ,
ಅಂದಿಗೆ ಪ್ರಥಮ ಮೂಲಸ್ಥಾನ ಶ್ರೀಶೈಲ.
ಇಂತೀ ನಾಲ್ಕುಯುಗಕ್ಕೆ ನಾಲ್ಕು ಜಂಗಮಸ್ಥಲ,
ನಾಲ್ಕು ಯುಗಕ್ಕೆ ನಾಲ್ಕು ಲಿಂಗಸ್ಥಲ.
ಕೂಡಲ ಚೆನ್ನಸಂಗಮದೇವಾ.

(ಸಂ. ೨, ವ. ೧೦)

೧೧

ಅಂದು ಬಯಾಮೂರ್ತಿಯಾದನೊಬ್ಬ ಶರಣ.
ಆ ಶರಣನ ಹೂಂಕಾರದಲ್ಲಿ ಹುಟ್ಟಿದ ಬ್ರಹ್ಮ.
ಆ ಶರಣನ ದಿವ್ಯಬುದ್ಧಿಯಿಂದ ಹುಟ್ಟಿದಾತ ವಿಷ್ಣು.
ಆ ಶರಣನ ಕ್ರೋಧದಿಂದ ಹುಟ್ಟಿದಾತ ರುದ್ರ.
ಇಂತೀ ಮೂವರ ಪೀಠವಂತಿರಲಿ.
ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ ಮೂರುಲೋಕವೆಲ್ಲಾ
ಸಂಗನಬಸವಣ್ಣಂಗೆ ನಮೋ ನಮೋ ಎನುತಿರ್ದಿತು.

(ಸಂ. ೨, ವ. ೧೦)

೧೨

ಕರ್ಮವೆಂಬ ಅಂಕದೊಳು ತೊಡರಿದೆ.
ಬಿನ್ನಪವನವಧಾರು ನಿಮ್ಮಾಳಿನ ಭಾಷೆಯ.
ಕಡೆಗಳಕೆ ನೂಕುವೆ, ಕೆಡಹುವೆ ಅಂಕವನು.
ನಡುವೆ ಪಸರಿಸಿದಡೆ ನಿಮ್ಮಾಳಾನಲ್ಲ!
ಕರೆದರೆ ಓ ಎನಿ°ಸಿ°ದಡೆ ನಿಮ್ಮಾಳಾನಲ್ಲ.
ಶಿವನೆಂಬ ದಂಡೆಯನೊಡ್ಡಿ ಗಣಮೇಳಾಪವೆಂಬ
ಅಲಗಿನಲಿರಿವೆ ಕೂಡಲಸಂಗಮದೇವಾ!

(ಸಂ. ೨, ವ. ೧೧)

---

೧-೨ ಸ (ಬ. ಷ. ವ-೬೯)
* ಸಿಂಗಿರಾಜಪುರಾಣದಲ್ಲಿ ೧೦ ಮತ್ತು ೧೧ನೆಯ ವಚನಗಳು ಸೇರಿ ಒಂದೆ ವಚನವಾಗಿದೆ. (ಸಂ.)

೧೩

ಅಂಜದಿರಂಜದಿರು ಹಿಂದೊಮ್ಮೆ ಭವದ ಬಟ್ಟೆಯ ಹೋದೆನೆಂದು,
ಅಂದೊಮ್ಮೆ ಅನಿಮಿಷಂಗೆ ಲಿಂಗವಿತ್ತುದೊಂದು
ಅಭವನ ಬಾಗಿಲಂ ಬಾರಿಸಿತ್ತು.
ಅಂಜನೆ ಜಲಗರ ಹೇಮರಸವ ಅಂಜಿ ಕುಡಿದೊಡೆ ?
ಉದರದೊಳಗಿದ್ದು ಸಿಂಗಾರವಮಾಡನೆ ಕಪಿ ?
ಸಿಂಗಾರವಮಾಡಿ ಜನಿಸಿದವಯ್ಯ.
ಅಳಿವುದೇ ಶಿವಪಿಂಡವು ? ಮರೆವುದೇ ಶಿವಜ್ಞಾನವು ?
ಹಿಂದೆ ಏಳುನೂರುವರುಷ ಮಂಡೋದರಿಯ
ಉದರದಲ್ಲಿರ್ದು ಜನಿಸನೆ ಇಂದ್ರಜಿತು ?
ನೀ ಹೊಟ್ಟೆಗೆ ವಿಭೂತಿಯ ಪಟ್ಟವ ಕಟ್ಟಿದಂದು
ಆಯ್ತೆನಗನುಗ್ರಹ, ಅಂಜದಿರು ಅಂಜರು
ಕೂಡಲಚನ್ನಸಂಗಯ್ಯ ನಿಮ್ಮ ತೊತ್ತಿನ ತೊತ್ತು ನಾನು.

(ಸಂ. ೪, ವ. ೧

೧೪

ಶಾಂತಿಯ ಮಾಡಹೋದರೆ ಬೇತಾಳ ಮೂಡಿದಂತಾಯ್ತು:
ಉಪಚಾರ ಬುದ್ಧಿಯಂಡಲೆದು.
ಸಿತಾಳದಾಪ್ಯಾಯನವಾದಡೆ ತೋರಿದನಯ್ಯಾ.
ಪಗಹಿತಾರ್ಥವಾಗಿ ಪ್ರಾಣಲಿಂಗವ ಕೊಟ್ಟು ಹೋಗಿ,
ಈಶನ ಮನೆಯ ಪೊಕ್ಕಡೆ ಇರಿಸಿದನೆ ಲಿಂಗವ ?
ಮಹೇಶ್ವರತನವ ನೋಡಿರೆ!
ಅರಸೆಂದು ತಾನೆ ಸ್ವತಂತ್ರನು.
ಅಳಲಿ ಬಳಲಿ ಹಾಡಿ ಹಂಬಲಿಸಿ ಅನಂತವಸ್ಥೆಯಿಂದೆ
ಲಕ್ಕದ ಮೇಲೆ ತೊಂಬತ್ತಾರು ಸಾವಿರಗೀತವನು
ಆಚಾರ ವಿಚಾರದಲ್ಲಿ ವಿಚಾರಿಸಿ
ವಿಚಿತ್ರನಾಭಿಯಾಕಾರವ ಕೊಟ್ಟು ಕಳುಹಿದರಯ್ಯಾ.
ಗುಹೇಶ್ವರನ ಶರಣ ತೋರಿದನಯ್ಯಾ
ನಮ್ಮ ಕೂಡಲಸಂಗನೆಂಬ ಲಿಂಗವನು.

(ಸಂ. ೪, ವ. ೨

೧೫

ಕೊಂಡಡಗಿದನೊಬ್ಬ, ಕೊಟ್ಟರಸಿದನೊಬ್ಬ;
ಈರೇಳು ಭುವನದೊಳಗೆ ವೃಷಭನು ವಿಸ್ಮಯಗೊಂಡನಯ್ಯಾ.
ಶಶಿಧರನು ಭೂಮಿಯ ಜಲಗುಗರ್ಜಿ ಹೇಮುವನರಸುವಂತೆ
ಅರಸುತಿಪ್ಪನಯ್ಯಾ ಜಂಗಮದೊಳಗೆ ಲಿಂಗವನು.
ಏಕೋನ್ನೈಷ್ಠೆಯ ಭಕ್ತಿಯ ಕಂಡಡೆ ಕೊಂಡೊಯ್ವನಯ್ಯಾ ಶಿವನು.
ಜಪ ತಪ ಸಮಾಧಿಯೊಳಗೆ
ಅನುಮಿಷನಡಗಿದೊಡೆ ಲಿಂಗಾಂಗಿ ಬಾರನೆ ?
ಪ್ರಭುದೇವರು ಅಸಂಖ್ಯಾತರಿಗೆ ಮಾಡಿದ ಸಯಿದಾನವನು
ಗುಹೇಶ್ವರನ ಶರಣನಾರೋಗಿಸಿಕೊಟ್ಟಡೆ
ಕೂಡಲಚೆನ್ನಸಂಗಯ್ಯ ಲಿಂಗವೆಂದರಿದನಯ್ಯಾ ಸಂಗನಬಸವಣ್ಣ.

(ಸಂ. ೪, ವ. ೩)

೧೬

ಒಡೆಯರು ಬಂದರೆ ಗುಡಿತೋರಣವ ಕಟ್ಟಿ;
ನಂಟರು ಬಂದರೆ ಸಮಯವಿಲ್ಲವೆನ್ನಿ.
ಅಂದೇಕೆಬಾರರು ನೀರಿಗೆ ನೇಣಿಗೆ ಹೊರಗಾದಂದು ?
ಸಮಯಾಚಾರಕ್ಕೊಳಗಾದಂದು ?
ಪರುಷ ಮುಟ್ಟಿದ ಕಬ್ಬಿಣ ಹೊನ್ನಾಯಿತ್ತು :
ಬಳಿಕ ಬಂಧುಗಳುಂಟೆ, ಕೂಡಲಸಂಗಮದೇವ ?

(ಸಂ. ೫, ವ. ೧)

೧೭

ನಿಮ್ಮ "ಶ್ರೀಪಾದವ" ಮುಟ್ಟಿ ಕರ್ಮ ಹರಿಯಿತ್ತು.
ನಿಮ್ಮ ಪ್ರಸಾದವನುಂಡು ಭವಗೆಟ್ಟೆನಯ್ಯಾ,
ಮನ ಪರುಷ, ದೃಷ್ಟಿ ಪರುಷ, ಭಾವ ಪರುಷ,
ನಡೆ ಪರುಷ, ನುಡಿ ಪರುಷವಾಯಿತ್ತು; ಲಿಂಗಗಣಂಗಳು.
ಕೂಡಲಸಂಗ ಮದೇವಾ,
ನಿಮ್ಮ ಶರಣರ ಅನುಭಾವದಿಂದ ನಾನು ಸುಖಿಯಾದೆನು!

(ಸಂ. ೮, ವ. ೧)

---

೧-೧ ಪ್ರಸಾದವ (ಮೂ).

೧೮

ಬ್ರಹ್ಮನಿಗೆ ಹಸ್ತ ಪರುಷ, ವಿಷ್ಣುವಿಗೆ ನಯನ ಪರುಷ,
ರುದ್ರಂಗೆ ವಾಕ್ಯಪರುಷ,
ಕೂಡಲಸಂಗನ ಶರಣರಿಗೆ ಪಾದ[ವೇ] ಪರುಷ!

(ಸ೦. ೮, ವ. ೨)

೧೯

ಕುಲದೈವ ಮನೆದೈವವೆನಗೆ ನಿಮ್ಮವರಯ್ಯಾ.
ತನು ಮೀಸಲು, ಮನ ಮೀಸಲು, ನಯನ ಮೀಸಲು ದೇವಾ.
ಕೂಡಲಸಂಗಮದೇವಾ, ನಿಮ್ಮ ಶರಣರಿಗೆನ್ನ.

(ಸಂ. ೮, ವ. ೩)

೨೦

ಕಿವಿಯ ಸೂತಕ ಹೋಯಿತ್ತು ಸದ್ಗುರುವಿನ ವಚನದಿಂದ.
ಕಂಗಳ ಸೂತಕ ಹೋಯಿತ್ತು ಸದ್ಭಕ್ತರ ಕಂಡೆನಾಗಿ.
ಕಾಯದ ಸೂತಕ ಹೋಯಿತ್ತು ನಿಮ್ಮ ಚರಣವ ಮುಟ್ಟಿದೆನಾಗಿ,
ಬಾಯ ಸೂತಕ ಹೋಯಿತ್ತು ನಿಮ್ಮೊಕ್ಕುದ ಕೊಂಡೆನಾಗೀ,
ನಾನಾ ಸೂತಕ ಹೋಯಿತ್ತು ನಿಮ್ಮ ಶರಣರ ಅನುಭಾವಿಯಾಗಿ,
ಕೂಡಲಸಂಗಮದೇವಾ,
ಎನ್ನಯ ಮನದಸೂತಕ ಹೋಯಿತ್ತು ನೀವಲ್ಲದನ್ಯರಿಲ್ಲೆಂದರಿದೆನಾಗಿ.

(ಸಂ. ೮. ವ. ೪)

೨೧

ನಯನದಾಹಾರ ಜಂಗಮವ ನೋಡಿಸುವೆ,
ಶ್ರೋತ್ರದಾಹಾರ ಜಂಗಮವ ಕೇಳಿಸುವೆ.
ಘ್ರಾಣದಾಹಾರ ಜಂಗಮವ ವಾಸಿಸುವೆ.
ಜಿಹ್ವೆಯಾಹಾರ ಜಂಗಮವ ರುಚಿಸುವೆ.
ಕವಚದಾಹಾರ ಜಂಗಮವ ಹೊದಿಸುವೆ.
ಅಧಿಕ ಪ್ರೇಮ ಪರಿಣಾಮಿಗಳ ಮಾಡುವೆ.
ಸಕಲಪದಾರ್ಥಗಳ ನೀಡುವೆ,
ಕೂಡಲಸಂಗಮದೇವಾ, ನಿಮ್ಮ ಶರಣರಿಗೆ.

(ಸ. ೮, ವ ೫)

೨೨

ಹೊತ್ತಾರೆಯೆದ್ದು ಕಣ್ಣ ಹೊಸೆವುತ್ತ,
ಎನ್ನೊಡಲಿಂಗೆ[೧] ಮಡದಿ ಮಕ್ಕಳಿಗೆಂದು
ಕುದಿದೆನಾದಡೆ ಎನ್ನ ಮನಕ್ಕೆ ಮನವೇ ಸಾಕ್ಷಿ!
ಭವಿಬಿಜ್ಜಳನ ಗದ್ದುಗೆಯಕೆಳಗೆ ಕುಳಿತು
ಓಲೈಸುವೆನೆಂದು ನುಡಿವರು,
"ಆಸನೇ ಶಯನೇ ಯಾನೇ ಸಂಪರ್ಕೇ ಸಹಭೋಜನೇ।
ಸಂಚರಂತಿ ಮಹಾಘೋರೇ ನರಕೇ ಕಾಲಮಕ್ಷಯಂ॥"
ಎಂಬ ಶ್ರುತಿಯ ಬಸವಣ್ಣನೋದುವನು ಎಂಬವರಿಗೆ
ಕೊಡುವೆನೆ ಉತ್ತರವ ? ಕೊಡಲಮ್ಮೆನು.
ಹೊಲೆಹೊಲೆಯರ ಮನೆಯಲ್ಲಿ ಹೊಕ್ಕು
ಸಲೆ ಕೈಕೂಲಿಯ ಮಾಡಿಯಾದಡೆಯೂ,
ನಿಮ್ಮ ನಿಲವಿಂಗೆ ಕುದಿವೆನಲ್ಲದೆ,
ಎನ್ನ ಒಡಲವಸರಕ್ಕೆ ಕುದಿದೆನಾದೊಡೆ
ತಲೆ ದಂಡೆ! ಕೂಡಲಸಂಗಮದೇವಾ.

(ಸಂ. ೮, ವ. ೬)

೨೩

ನಾನು ಆರಂಭವ ಮಾಡುವೆ ಗುರುಪೂಜೆಗೆಂದು,
ನಾನು ವ್ಯವಹಾರವ ಮಾಡುವೆ ಲಿಂಗಾರ್ಚನೆಗೆಂದು.
ನಾನು ಸೇವೆಯ ಮಾಡುವೆ ಜಂಗಮದಾಸೋಹಕ್ಕೆಂದು.
ನಾನಾವ ಕರ್ಮವ ಮಾಡಿದಡೆಯೂ ಕರ್ಮಫಲಭೋಗವ
ನೀನೇ ಕೊಡುವೆಯೆಂಬುದ ನಾನು ಬಲ್ಲೆ.
ನೀ ಕೊಟ್ಟ ದ್ರವ್ಯವನು ನಿಮಗಲ್ಲದೆ ಮತ್ತೊಂದು ಕ್ರಿಯ ಮಾಡೆನು;
ನಿಮ್ಮ ಸೊಮ್ಮಿಗೆ ಸಲಿಸುವೆನು.
ನಿಮ್ಮಾಣೆ, ಕೂಡಲಸಂಗಮದೇವಾ.

(ಸಂ. ೮, ವ. ೭)

೨೪

ಭಕ್ತನೆಂತೆಂಬೆ ಭವಿಯ ಸಂಗ ಬಿಡದನ್ನಕ್ಕರ ?
ಮಹೇಶ್ವರನೆಂತೆಂಬೆ ಪರಸ್ತ್ರೀ [೨]ಪರರರ್ಥ[೨] ಬಿಡದನ್ನಕ್ಕರ ?
ಪ್ರಸಾದಿಯೆಂತೆಂಬೆ ಆದಿವ್ಯಾಧಿ ನಷ್ಟವಾಗದನ್ನಕ್ಕರ ?

---

೧+ (ಮೂಲ)     ೨–೨ ಪದಾರ್ಥ(ಮೂಲ)

ಪ್ರಾಣಲಿಂಗಿಯೆಂತೆಂಬೆ ಪ್ರಾಣ ಲಿಂಗದಲ್ಲಿ ಸ್ವಸ್ಥಿರವಾಗದನ್ನಕ್ಕರ ?
ಶರಣನೆಂತೆಂಬೆ ಪಂಚೇಂದ್ರಿಯ ನಷ್ಟವಾಗದನ್ನಕ್ಕರ ?
ಐಕ್ಯನೆಂತೆಂಬೆ ಜನನ ಮರಣರ ಹಿತನಾಗದನ್ನಕ್ಕರ ?
ಇವೆಲ್ಲ ಒಂದೊಂದು ಭಾಷೆ ಮೋಸ ವ್ರತ ನೇಮಂಗಳ ನಾನರಿಯೆ,
ಅಘಟಿತಘಟಿತ ವರ್ತಮಾನವ ನಾನರಿಯೆ.
ನಿಮ್ಮ ಶರಣರ ತೊತ್ತು-ಭೃತ್ಯಾಚಾರವ ಮಾಡುವೆ.
ಕೂಡಲಸಂಗಮದೇವಾ.

(ಸಂ. ೮ ವ. ೮)

೨೫

ಕಂದಿದೆನಯ್ಯಾ ನಾನು ನೋಡುವರಿಲ್ಲದೆ;
ಕುಂದಿದೆನಯ್ಯ ನಾನು ನುಡಿಸುವರಿಲ್ಲದೆ;
ಬಡವನಾದೆನಯ್ಯ ನಾನು ತನುಮನಧನವ ಬೇಡುವರಿಲ್ಲದೆ;
ಕಾಡುವ ಬೇಡುವ ಶರಣರ ತಂದು
ಕಾಡಿಸು ಕೂಡಲಸಂಗಮದೇವಾ.

(ಸಂ. ೮, ವ. ೯)

೨೬

ಬೆದರಿಸುವ, ಬೆಚ್ಚಿಸುವ, ಮುಯ್ಯಾನುವ,
ಮೇಳವಾಡುವ, ಆಳಿಗೊಳಿಸುವ,
ಅಳಲಿಸುವ ನುಡಿಸುವ, ಬಳಲಿಸುವನೊತ್ತಿ ನೋಡುವ.
ಒಳಹೊರಗೆ ಪೊಳೆದು ಹೋಹ, ಕೇಳದೆ ಬಹ.
ಬೇಳು ಮಾಡುವನಾಳವಾಡುವ, ಹೊಳೆದು ಹೋಹ.
ನಾ ಇದಕ್ಕಂಜೆ ಕೂಡಲಸಂಗಮದೇವಾ.

(ಸಂ. ೮ ವ. ೧೦)

೨೭

ಅರ್ಥವನರ್ಥವಮಾಡಿ ಕೋಳಾಹಳಂಗೆಯ್ಯುತ್ತಿರಲಿ.
ಹುಟ್ಟಿದ ಮಕ್ಕಳ ಕಡಿದು ಖಂಡವ ಮಾಡುತ್ತಿರಲಿ.
ಮುಟ್ಟುವ ಸ್ತ್ರೀಯಳ ಮುಂದೆ ಅಭಿಮಾನಂಗೊ೧ಳು೨ತಿರಲಿ.

---

೧-೨ ಂಡು ನೆರೆವು (ಬ.ಷ.ವ-೭೦೬).

ಇಂತೀ ತ್ರಿವಿಧವು ಹೊರಗಣವು;
ಮತ್ತೆನ್ನಂಗದ ಮೇಲೆ ಬರಲಿ,
ಹಿಡಿದು ಖಂಡವ ಕೊಯ್ಯುತ್ತಿರಲಿ,
ಇಕ್ಕುವ ಶೂಲ ಪ್ರಾಪ್ತಿಯಾಗಲಿ,
ಇತ್ತೊಂದೆಶೆ ಅತ್ತೊಂದೆಶೆಯಾಗುತ್ತಿರಲಿ;
ಮತ್ತೆ ಲಿಂಗಜಂಗಮದ ಆರಾಧನೆಯ ಮಾಡುವೆ, ಪ್ರಸಾದಕ್ಕೆ ತಪ್ಪೆ,
ಇಂತಪ್ಪ ಭಾಷೆ ಕಿಂಚಿತ್ತು ಹುಸಿಯಾದೊಡೆ
ನೀನಂದೆ ಮೂಗಕೊಯ್ಯಿ, ಕೂಡಲಸಂಗಮದೇವಾ!

(ಸಂ. ೮, ವ. ೧೧)

೨೮

ಎಂಬತ್ತುನಾಲ್ಕು ಲಕ್ಷದೊಳಗೊಂದು ಮುಖವಾಗಿ
ಕಾಡಿ ನೋಡೆನ್ನನು, ಬೇಡಿ ನೋಡೆನ್ನನು.
ಬೇಡದಿರ್ದೊಡೆ, ಅಯ್ಯಾ, ನಿನಗೆ ಪ್ರಮಥರಾಣೆ!
ನೀನು ಆವ ಮುಖದಲ್ಲಿ ಬಂದು ಬೇಡಿದಡೀವೆ
ಕೂಡಲಸಂಗಮದೇವ.

(ಸಂ. ೮, ವ. ೧೨)

೨೯

ಆನೆ ಭಂಡಾರ ರಾಯಸದ ಕುದುರೆಯು
ಬೇಡುವರಿಲ್ಲದೆ ಬಡವಾದೆನಯ್ಯಾ.
ಬೇಡುವದೇನು ದೇವಾ ?
ಮುನ್ನ ಬೇಡಿದೆ ಸಿಂಧುಬಲ್ಲಾಳನ ವಧುವನು;
ಇನ್ನು ಬೇಡಿದೊಡೆ ನಿಗಳವನಿಕ್ಕುವೆ.
ಬೇಡಿದ ಶರಣರಿಗೆ ನೀಡದಿರ್ದಡೆ
ತಲೆದಂಡ! ಕೂಡಲಸಂಗಮದೇವಾ.

(ಸಂ. ೮, ವ. ೧೩

೩೦

ನೀನು ಇಕ್ಕಿದ ಬೀಯದಲ್ಲಿ ವಂಚನೆಯುಳ್ಳಡೆ
ಸಂಗಾ ನಿನ್ನ ತೊತ್ತುಗೆಲಸಕ್ಕೆ ದೂರವಯ್ಯಾ.
ಕಡಿವಂದದೆ ಕಯ್ಯಹಿಡಿದು ಬಡಿದು
ಗಲ್ಲವ ನುಲಿವುದಯ್ಯ.
ತುಡುಗುಣಿ ಸ್ವಭಾವವೆನ್ನಲ್ಲಿಲ್ಲಯ್ಯಾ.
ಜಂಗಮವು ಮನೆಗೆ ಬಂದಡೆ ಓಸರಿಸಿದೆನಾದಡೆ
ಹಿಡಿದು ಮೂಗ ಕೊಯ್ಯ್ಯ ಕೂಡಲಸಂಗಮದೇವಾ.

(ಸಂ. ೮. ವ. ೧೪)

೩೧

ಭಕ್ತದೇಹಿಕದೇವ° ಸದುಭಕ್ತರ ಬಳಿಯಲ್ಲಿ,
ಆಳ್ದನು ಬರಲು, ಮಂಚವಮೇಲೆ ಇಪ್ಪುದು ಗುಣವೆ ಹೇಳಾ ?
ಕೂಡಲಸಂಗಮದೇವಾ,
ಜಂಗಮವು ಮನೆಗೆ ಬಂದಾರೆಂದು ನಾನು
ಮಂಚವನೇರದ ಭಾಷೆ.!

(ಸಂ. ೮, ವ. ೧೫)

೩೨

ಜಂಗಮದ ಸನ್ನಿಧಿಯಲ್ಲಿ ವಾಹನವನೇರಲಮ್ಮೆ!
ಏರಿದೊಡೆ ಭವಹಿಂಗದು, ಏನು ಕಾರಣ ?
ಮುಂದೆ ಶೂಲವನೇರುವ ಪ್ರಾಪ್ತಿಯುಂಟಾದ ಕಾರಣ!
ಜಂಗಮವು ಬರಲಾಸನದೊಳಿರಲಮ್ಮೆ;
ಇದ್ದರೆ ಭವ ಹಿಂಗದು, ಅದೇನು ಕಾರಣ ?
ಮುಂದೆ ಕಾದಿಟ್ಟಿಗೆಯ ಮೇಲೆ
ಕುಳ್ಳಿಸುವ ಪ್ರಾಪ್ತಿಯುಂಟಾದ ಕಾರಣ.
ಇಂತೀ ಬಾಧೆ ಭವಂಗಳಿಗೆ ಅಂಜುವೆನಯ್ಯಾ.
ನಿಮ್ಮವರ ಸುಳುಹು ನೀವೆಂದು ಭಾವಿಸಿ

---

(ಮೂಲ)

ತೊತ್ತು-ಭೃತ್ಯನಾಗಿರಿಸಯ್ಯಾ ಕೂಡಲಸಂಗಮದೇವ.

ಸಾಕ್ಷಿಗ್ರಂಥ:

ಭಸ್ಮಾಂಗಮಾಗತಂ ದೃಷ್ಟ್ವಾ ಆಸನಂ ಚ ಪರಿತ್ಯಜೇತ್।

ದದ್ಯಾಚ್ಚೇತರಥಾ ತಸ್ಯ ಪೂರ್ವಧರ್ಮೋ ವಿನಶ್ಯತಿ॥

(ಸಂ ೮. ಮಾ. ೧೬)

೩೩

ನಚ್ಚಿದೆನೆಂದಡೆ ಮೆಚ್ಚಿದೆನೆಂದಡೆ ಸಲೆಮಾರುವೋದೆನೆಂದಡೆ
ತನುಮನಧನವನೊಡ್ಡಿ ಅಲ್ಲಾಡಿಸುವ.
ಇವೆಲ್ಲಕ್ಕಂಜದಿರ್ದವರ ಕಂಡಡೆ,
ಭಕ್ತಿಕಂಪಿತ ಕೂಡಲಸಂಗಮದೇವ.

(ಸಂ. ೮, ವ. ೧೭)

೩೪

ಲಿಂಗಮುಖದಿಂದ ಬಂದ ಪ್ರಸಾದವಲ್ಲದೆ ಕೊಂ[೧]ಡೆನಾದ[೧]ಡೆ
ಮಕ್ಕಳಡಗು ನರಮಾಂಸವಯ್ಯಾ;
ಲಿಂಗಾರ್ಪಿತವಲ್ಲದ ಉದಕವ ಕೊಂಡಡೆ ಸುರೆ ಮೂತ್ರ.
ನಿಮ್ಮ ಗಣಾಚಾರಕ್ಕೆ
ಸಲೆ ಲಿಂಗಾರ್ಪಿತವಲ್ಲದೆ ಹುಲ್ಲುಕಡ್ಡಿಯ ಇರಿದೆನಾದಡೆ
ನಾಯಿ ಎಲುವು, ಬದ್ಧ ಮಲಕ್ಕೆ ಬಾಯಿ ತೆಗೆದಂತೆ;
ನಿಮಗೆತ್ತಿದ ಕರದಲ್ಲಿ ಮತ್ತೊಂದಕ್ಕೆ ಕೈಯಾಂತಡೆ,
ಅನ್ಯಕ್ಕೆ ತಲೆವಾಗಿದಡೆ, ವ್ರತಭಂಗ.
ಅಳವರಿಯದೆ ನುಡಿದೆನು :
ನುಡಿದ ನುಡಿಯ ಕಡೆಮುಟ್ಟ ಸಲಿಸುವೆನಯ್ಯಾ.
ಸಲಿಸದಿರ್ದಡೆ ತಲೆದಂಡ ಕೂಡಲಸಂಗಮದೇವಾ.

(ಸಂ. ೮, ವ ೧೮)

೩೫

ಎನ್ನ ಕಾಯಕ್ಕೆ ಕಾಹ ಹೇಳುವರಲ್ಲದೆ
ಮನಕ್ಕೆ ಕಾಹ ಹೇಳುವರಿಲ್ಲಯ್ಯಾ
ಅಣಕದ ಮಿಂಡತನಂಗಳ ನೋಡಿ ಕಂಡೆನವ್ವಾ.

---

೧-೧ ಡ(ಮೂಲ).

ಈತನ ಲೀಲೆಗಂಡಾನು ಬೆರಗಾದೆ.
ಕೂಡಲಸಂಗಮದೇವ ಎನ್ನ ಮನಕ್ಕೆ ಕಾಹ ಹೇಳಿದನವ್ವಾ.

(ಸಂ. ೯. ವ. ೧)

೩೭

ಹಿಂದೆ ಸಂದ ಭಕ್ತರಂತಾನೊಂದೊಂದ ಬೇಡಿಕಾಡುವನಲ್ಲ.
ಹಿಂದೆ ಬೆನ್ನಲಿ ಬಂದು ಬಳಲಿದೆ,
ಇನ್ನೊಂದ ಬೇಡೆನಂಜದಿರಂಜದಿರಯ್ಯಾ.
ಆಶಾಪಾಶ ಎನ್ನಲುಳ್ಳಡೆ, ಕೂಡಲಸಂಗಾ, ನಿಮ್ಮಾಣೆ.

(ಸಂ. ೯, ವ. ೨)

೩೭

ಓಡಗಿರೋಡದಿರು, ನಿನ್ನ ಬೇಡುವವ ನಾನಲ್ಲ ಶಿವನೆ.
ನೋಡುವೆ ಕಣ್ಣ ತುಂಬಿ; ಆಡಿ ಪಾಡಿ ನಲಿದಾಡುವೆ;
ಬೇಡೆನ್ನ ಕೂಡೆ ಮಾತನಾಡಲಾಗದೆ [ಶಿವನೆ],
ಎಲೆ ಕೂಡಲಸಂಗಮದೇವಾ, ನೀನಾಡಿಸುವ ಬೊಂಬೆ ನಾನು.

(ಸಂ. ೯, ವ. ೩)

೩೮

ಕೊಂಡುದಿಲ್ಲ ಕೊಟ್ಟುದಿಲ್ಲ, ಲಗವಿಲ್ಲ ವಿಲಗವಿಲ್ಲ,
ನಮಗೆಯು ನಿಮಗೆಯು ಸೊಮ್ಮು ಸಂಬಂಧವಿಲ್ಲ.
ನಮಗೆ ನಿಮಗೆ ಭಾವ ಬೇದಗಳಿಲ್ಲ,
ಕೂಡಲಸಂಗಮದೇವ, ಇರು, ಇರದೆ ಮಾಣು.

(ಸಂ. ೯, ವ. ೪)

೩೯

ಆಕಳ, ಕಳ್ಳರು ಕೊಂಡರೆನಬೇಡೆಲವೊ,
ಸಂಗ ಕೊಂಡನೆಂಬೊ!
ಮಾತಾಡಿದಿರೆಲವೊ; ಲಿಂಗ ಕೊಂಡನೆಂಬೊ!
ಗಳಹದಿರೆಲವೊ; ಅಲ್ಲಿ ಉಂಬನು ಸಂಗ, ಇಲ್ಲಿ ಉಂಬನು ಸಂಗ!
ಕೂಡಲಸಂಗಮದೇವ ಏಕೋಭಾವ.

(ಸಂ. ೧೦, ವ. ೧)

೪೦

ಒಡನಿರ್ದ ಸತಿಯೆಂದು ನಚ್ಚಿರ್ದೆನಯ್ಯಾ,
ಕೈವಿಡಿದ ಸಜ್ಜನೆಯೆಂದು ನಂಬಿರ್ದೆನಯ್ಯಾ.
ಅಯ್ಯೋಃ, ನಮ್ಮಯ್ಯನ ಕೈ ನೊಂದಿತು,
ತೆಗೆದುಕೊಡಾ ಎಲೆ ಚಂಡಾಲಗಿತ್ತೀ!
ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದಡೆ
ಕೂಡಲಸಂಗಮದೇವನಲ್ಲದೆ ಆರೂ ಇಲ್ಲಾ.

(ಸಂ. ೧೦, ವ. ೨)

೪೧

ಎನ್ನಂಗದ ಮೇಲಿದ್ದ ಲಿಂಗವ ದಿಟಮಾಡಲರಿಯೆನು.
ಜಂಗಮವೆ ಲಿಂಗವೆಂಬ ಮಾತೆನಗೆ ಕಷ್ಟ.
ಕಲಹ ಕಡುಗೋಪಿ ನಾನಯ್ಯಾ.
ದುರ್ಮುಖ ದುರಾಚಾರಿ ನಾ.
ಎನಗೆ ಕರುಣಿಸು ಕೂಡಲಸಂಗಮದೇವಾ.

(ಸಂ. ೧೧, ವ. ೧)

೪೨

ಓದಿಸುವಣ್ಣಗಳಂತೆ ಮಾತಾಡಕಲಿಸಿದರಲ್ಲದೆ
ಮನ ಮಾತಾಡ ಕಲಿಸಲಿಲ್ಲವಯ್ಯಾ.
ಧನಕ್ಕೆ ಮುನಿವರಲ್ಲದೆ ಎನ್ನ ಮನಕ್ಕೆ ಮುನಿವರಿಲ್ಲಯ್ಯಾ,
ಧನಕ್ಕೆ ಮುನಿವರಿಗೆ ಮುನಿದು,
ಎನ್ನ ಮನಕ್ಕೆ ಮುನಿದ,
ಕೂಡಲಸಂಗಮದೇವಾ, ಮಡಿವಳ ಮಾಚಯ್ಯನು.

(ಸಂ. ೧೧, ವ. ೨)

೪೩

ಕಳಹೋಹಡೆ ಕನ್ನದುಳಿಯ ಹಿಡಿವೆ;
ಬಂದಿವಿಡಿದಡೆ ನಿಮ್ಮಂದ ಮುಂದೆ ನಡೆವೆ
ಮನಭೀತಿ ಮನಶಂಕೆಗೊಂಡೊಡೆ ಆಣೆ, ನಿಮ್ಮಾಣೆ.

ನಿಮ್ಮನೊಲಿಸಿದ ಪುರಾತನರಾಣೆ.
ಆಳ್ದರ ನಡೆ ಸದಾಚಾರವೆನ್ನದಿರ್ದೊಡೆ,
ಕಟ್ಟಾಳು ಶಿಷ್ಟತನಕ್ಕೆ ಹೋಹ
ಕಷ್ಟವ ನೋಡಾ ಕೂಡಲಸಂಗಮದೇವಾ!

(ಸಂ. ೧೭, ವ. ೧)

೪೪

ಅಡ್ಡತ್ರಿಪುಂಡ್ರ ಮಣಿಮಕುಟ ವೇಷದವರ ಕಂಡರೆ
ನಂಬುವುದೆನ್ನ ಮನ, ನಚ್ಚುವುದೆನ್ನ ಮನ,
ನಂಬುವುದೆನ್ನ ಮನ ಸಂದೇಹವಿಲ್ಲದೆ.
ನಿಮ್ಮ ನಂಬದವರ ಕಂಡರೆ ಹೊದ್ದೆ ಕೂಡಲಸಂಗಮದೇವಾ.

(ಸಂ. ೧೯, ವ. ೧)

೪೫

ವಿಭೂತಿ ರುದ್ರಾಕ್ಷಿಯಿದ್ದವರ ಲಿಂಗವೆಂಬೆ.
ಇಲ್ಲದವರ ಭವಿಗಳೆಂಬೆ.
ಕೂಡಲಸಂಗಮದೇವಾ, ಸದ್ಭಕ್ತರ ನೀವೆಂಬೆನಯ್ಯಾ.

(ಸಂ. ೧೯, ವ. ೨)

೪೬

ವಾರವೆಂದರಿಯೆ. ದಿನವೆಂದರಿಯೆ,
ಏನೆಂದರಿಯೆನಯ್ಯಾ;
ಇರುಳೆಂದರಿಯೆ, ಹಗಲೆಂದರಿಯೆ.
ಏನೆಂದರಿಯೆನಯ್ಯಾ;
ನಿಮ್ಮುವ ಪೂಜಿಸಿ ಎನ್ನುವ ಮರೆದೆ, ಕೂಡಲಸಂಗಮದೇವಾ.

(ಸಂ. ೨೨, ವ. ೧)

೪೭

ಉರಿವಕೊಳ್ಳಿಯ ಮಂಡೆಯ ಮೇಲಿಕ್ಕಿದರೆ
ಉರಿವುದಲ್ಲದೆ ಮಾಣ್ಬುದೆ ಅಯ್ಯಾ ?
ಕಲ್ಲುಗುಗ್ಗರಿಯ ಮೆದ್ದರೆ ಹಲ್ಲುಹೋಹುದು ಮಾಣ್ಬುದೆ ?
ಕೂಡಲಸಂಗನ ಶರಣರ ಕೂಡೆ
ಸರಸಬೇಡ ಮರಣತಪ್ಪದು.

(ಸಂ. ೨೨, ವ. ೨)

೪೮

ಮಾತುಮಾತಿಗೆ ನಿನ್ನಕೊಂದರಲ್ಲೊ ಹೋತೇ,
ಆಳು ಕಂಡಾ, ಮತ್ತೆ ಆಳು ಕಂಡೆಯಾ,
ವೇದವ ಬಲ್ಲವರಿಗೊಮ್ಮೆ ಆಳು ಕಂಡೆಯಾ,
ಶಾಸ್ತ್ರವ ಬಲ್ಲವರಿಗೊಮ್ಮೆ ಆಳುಕಂಡೆಯಾ
ಶ್ಲೋಕ:
"ಅಜೋ ವಿಧಿರಜೋ ವಿಷ್ಣು ರಜಶ್ಶಂಭುರಜಸ್ತಥಾ
ಅಜಸ್ತ್ರೀವರ್ಷಕೋ ವ್ರೀಹಿರಜೋ ರಾಮಪಿತಾಮಹಃ"
ನಿನ್ನ ಘನಕ್ಕೆ ತಕ್ಕುದ ಬಲ್ಲ ಕೂಡಲಸಂಗಮದೇವ.

(ಸಂ. ೨೫, ವ. ೧)

೪೯

'ಈಶ್ವರ ಸದ್ಭಾವೇ ಕಿಂ ಪ್ರಮಾಣ' ವೆಂಬಾ ಮೀಮಾಂಸಕನ
'ಓಂ ದ್ಯಾವಾಭೂಮೀಜಯನ್ ದೇವ ಏಕಃ'
ಎಂಬ ಸುರಗಿಯಲ್ಲಿರಿವೆ,
ವೈಶೇಷಿಕವೆಂಬ ಇಟ್ಟಿಗೆಯಲ್ಲೊರಸುವೆ,
ಕೂಡಲಸಂಗಯ್ಯನೆಂಬ ಕನ್ನಡಿಯ ತೋರುವೆ.

(ಸಂ. ೨೭, ವ. ೧)

೫೦

ನೀನಲ್ಲದನ್ಯದೈವವುಂಟೆಂಬನ ಬಾಯ
ಕೆನ್ನೆವಾರ ಸೀಳಿದಲ್ಲದೆ ಎನ್ನ ಮುನಿಸು ನಿಲ್ಲದಯ್ಯಾ.
ಕೆನ್ನೆವಾರ ಸೀಳಿದಲ್ಲದೆ ಎನ್ನ ಮುನಿಸು ಹೋಗದಯ್ಯಾ.
ಎನ್ನ ಬಿನ್ನಪವನವಧರಿಸು, ಕೂಡಲಸಂಗಮದೇವಾ.

(ಸಂ. ೨೭, ವ. ೨)

೫೧

ದೇವಲೋಕಕ್ಕೆ ಸರಿ ಬೇರೆಲೋಕವಿಲ್ಲ;
ಶಿವಮಂತ್ರಕ್ಕೆ ಸರಿ ಬೇರೆ ಮಂತ್ರವಿಲ್ಲ;
ಜಗಕ್ಕಿಕ್ಕಿದೆ ಮುಂಡಿಗೆಯನೆತ್ತಿಕೊಳ್ಳಿ;
ಕೂಡಲಸಂಗಯ್ಯನಲ್ಲದೆ ದೈವವಿಲ್ಲ.

(ಸ. ೨೨, ವ. ೩)

೩೨

ತಂದೆ ನೀನು, ತಾಯಿ ನೀನು, ಬಂಧು ನೀನು [ಬಳಗ ನೀನು]
ನೀನಲ್ಲದೆ ಮತ್ತಾರೂ ಇಲ್ಲವಯ್ಯಾ.
ಕೂಡಲಸಂಗಮದೇವಾ, ಹಾಲಲದ್ದು, ನೀರಲದ್ದು.

(ಸಂ. ೨೮, ವ. ೧)

೩೩

ಚತುರ್ವೇದಿಯಾದಡೇನು ? ಲಿಂಗವಿಲ್ಲದವನು ಹೊಲೆಯನು.
ಶ್ವಪಚನಾದಡೇನು ಲಿಂಗವಿದ್ದವನು ಕುಲಜನು.
ಆತನ ನುಡಿಗಡಣವೆ ಲೇಸು,
ಆತನ ಪ್ರಸಾದವೆನಗಮೃತಸೇವನೆ.
ಗ್ರಂಥ :
"'ನಮೋ ಪ್ರಿಯಶ್ಚತುರ್ವೆದೀ ಮದ್ಭಕ್ತಶ್ಶ್ವಪಚೋಽಪೀವಾ ।
ತಸ್ಮೈದೇಯಂ ತತೋಗ್ರಾಹ್ಯಂ ಸ ಚ ಪೂಜ್ಯೋ ಯಥಾಸ್ಮ್ಯಹಂ॥'"
ಕೂಡಲಸಂಗಮದೇವಾ, ನಿಮ್ಮ ಪೂಜಿಸುವಾತನೆ ಉತ್ತಮನು
ನಿಮ್ಮ ಪೂಜೆಯ ಮಾಡದಾತನೆ ಶುದ್ಧ ಹೊಲೆಯನು.

(ಸಂ. ೨೮, ವ. ೨)

೩೪

ಓಡೆತ್ತಬಲ್ಲದೊ ಅವಲಕ್ಕಿಯ ರುಚಿಯ ?
ಕೋಡಗ ಬಲ್ಲುದೆ ಸೆಳೆಮಂಚದ ಸುಖವ ?
ಕಾಗೆ ನಂದನವನದೊಳಿರ್ದಡೆ ಕೋಗಿಲೆಯಾಗಬಲ್ಲುದೆ ?
ಕೊಳನ ತಡಿಯಲೊಂದು ಬಕ ಕುಳ್ಳಿರ್ದಡೆ
ಕಲಹಂಸನಾಗಬಲ್ಲುದೆ, ಕೂಡಲಸಂಗಮದೇವಯ್ಯಾ ?

(ಸಂ. ೨೯, ವ. ೧)

೩೫

ಹುತ್ತವ ಕಂಡಲ್ಲಿ ಹಾವಾಗಿ,
ನೀರ ಕಂಡಲ್ಲಿ ಹೊಳೆಯಾದವನ ಮೆಚ್ಚುವನೆ ?
ಬಾರದ ಭವಕ್ಕೆ ಬರಿಸುವನಲ್ಲದೆ ಮೆಚ್ಚುವನೆ ?

ಅಘೋರ ನರಕವನುಣಿಸುವನಲ್ಲದೆ ಮೆಚ್ಚುವನೆ ?
ಆಟಮಟದ ಭಕ್ತರ ಕಂಡಡೆ
ಕೋಟಲೆಗೊಳಿಸುವನು ಕೂಡಲಸಂಗಯ್ಯನು.

(ಸಂ. ೨೮, ವ. ೨)

೫೬

ಗೀಜಗನಗೂಡು, ಕೋಡಗದಣಲ ಸಂಚ,
ಬಾದುಮನ ಮದುವೆ, ಬಾವುಲ ಬಿದ್ದಿನಂತೆ,
ಜೂಜುಗಾರನ ಮಾತು, ಬೀದಿಗುಂಡನ ಸೊಬಗು,
ಓಡಿನೊಳಗಗೆ ಹೊಯ್ದಂತೆ ಕಾಣೆಲವೊ!
ಶಿವನಾದಿಯನರಿಯದನ ಭಕ್ತಿ
ತೋಧನೆಗೆ ಮುದ್ದುಗೊಂಡಂತೆ, ಕೂಡಲಸಂಗಯ್ಯಾ!

(ಸಂ. ೨೯, ವ. ೩)

೫೭

ನೀ ಹುಟ್ಟಿಸಿದಲ್ಲಿ ಹುಟ್ಟಿ,
ನೀ ಕೊಂದಲ್ಲಿ ನಾ ಸಾಯದಿರ್ದರೆ ಎನ್ನ ವಶವೆ ಅಯ್ಯಾ ?
ನೀನಿರಿಸಿದಂತಾನಿರದೆ ಎನ್ನ ವಶವೆ ಅಯ್ಯಾ ?
ನೀ ಮಾಡಿದಂತಾನಾಗದೆ ಎನ್ನ ವಶವೆ ಅಯ್ಯಾ ?
ಅಕಟಾ! ಎನ್ನವನೆನ್ನವನೆನಿಸಯ್ಯಾ, ಕೂಡಲಸಂಗಮದೇವಾ.

(ಸಂ. ೨೯, ವ. ೪)

೫೮

ನಾಳೆ ಬಹುದು ನಮಗಿಂದೇ ಬರಲಿ;
ಇಂದು ಬಹುದು ನಮಗೀಗಲೇ ಬರಲಿ;
ಇದಕಾರಂಜುವರಯ್ಯಾ ? ಎಲೆ ಮನವೆ–
'ಜಾತಸ್ಯ ಮರಣಂ ಧ್ರುವಂ'; ಪುಣ್ಯದ ಫಲವು.
ಇದಕಾರಂಜುವರು ? ಕರ್ತು ಕೂಡಲಸಂಗಮದೇವಾ,
ಇದ ತಪ್ಪಿಸುವಡೆ ಹರಿಹರಬ್ರಹ್ಮಾದಿಗಳಿಗಳವಲ್ಲ!

(ಸಂ. ೨೯, ವ. ೫)

೫೯

ಈ ಕೈಯಲಿ ಸುಖವು, ಈ ಕೈಯಲಿ ದುಃಖವು.
ಏಕಯ್ಯಾ ನೀ ನಮ್ಮ ಬರಿದೆ ಬಳಲಿಸುವೆ ?
ನಾನಾರ ಸೇರುವೆನಯ್ಯ? ಆರೂ ಇಲ್ಲದ ದೇಶಿಗ ನಾನು.
ಕಣಾ, ಕೂಡಲಸಂಗಮದೇವಾ.

(ಸಂ. ೨೯, ವ. ೬)

೬೦

ಬಲೆಗೆ ಸಿಕ್ಕಿದ ಮೃಗದಂತೆ ನಾನಯ್ಯಾ;
ಮರಿದಪ್ಪಿದ ಹುಲ್ಲೆಯಂತೆ ದೆಸೆದೆಸೆಗೆ ಬಾಯಿಬಿಡುತ್ತಿರುವೆನಯ್ಯಾ.
ನಾನಾರ ಸಾರುವೆನಯ್ಯ ? ತಾಯಾಗಿ ತಂದೆಯಾಗಿ ನೀನೇ?
ಸಕಲಬಂಧು ಬಳಗವು ನೀನೆ ಕೂಡಲಸಂಗಮದೇವಾ.

(ಸಂ. ೨೯, ವ. ೬)

೬೧

ಕೊಡುವಾತ ಸಂಗ, ಕೊಂಬಾತ ಸಂಗ ಕಾಣಿರೆಲವೊ!
ನರಮಾನವರು ಕೊಡುವರೆಂಬವನ ಬಾಯಲಿ
ಬಾಲಹುಳುಗಳು ಸುರಿಯವೇ ?
ಮೂರು ಲೋಕಕ್ಕೆ ನಮ್ಮ ಕೂಡಲಸಂಗಯ್ಯ ಕೊಡುವ ಕಾಣಿರೆಲವೊ!

(ಸಂ. ೩೧, ವ. ೧)

೬೨

ಕಾಯದ ಕಳವಳಕ್ಕಂಜಿ 'ಕಾಯಯ್ಯಾ' ಎನ್ನೆನು.
ಜೀವನೋಪಾಯಕ್ಕಂಜಿ 'ಈಯಯ್ಯಾ' ಎನ್ನೆನು.
'ಯದ್ಭಾವಂ ತದ್ಭವತಿ' ಉರಿಬರಲಿ ಸಿರಿಬರಲಿ—
ಬೇಕು ಬೇಡೆನ್ನೆನಯ್ಯಾ.
ಆನು ನಿಮ್ಮ ಹಾರೆ, ಮಾನವರ ಬೇಡೆನಯ್ಯಾ.
ಆಣೆ, ನಿಮ್ಮಾಣೆ, ಕೂಡಲಸಂಗಮದೇವಾ.

(ಸ. ೩೧, ವ. ೨)

೬೩

ಧನ ಧಾನ್ಯ ಹೋಯಿತ್ತೆಂದಡೆ. ಮನ ಬೆದರಿತೆಂದಡೆ,
ಚಿತ್ತ ಹೆದರಿದಡೆ, ತನು ತೆರಳಿದಡೆ,
ಭಾವ ಓಸರಿಸಿದಡೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ.

ತನುಮನಧನವನಲ್ಲಾಡಿಸಿ ನೋಡುವ ಒಡೆಯನು ನೀನೆ,
ಹರಣವ ಮೇಲೆತ್ತೊಡೆ ಕಳವಳವೆ, ಕೂಡಲಸಂಗಮದೇವಾ ?

(ಸಂ. ೩೧, ವ. ೩)

೭೪

ಆರು ಮುನಿದೆಮ್ಮನೇನು ಮಾಡುವರಯ್ಯಾ ?
ಊರು ಮುನಿದು ಎಮ್ಮನೆಂತು ಮಾಡುವರಯ್ಯಾ ?
ಕೊಡಬೇಡ ನಮ್ಮ ಕುನ್ನಿಗೆ ಕೂಸ;
ಇಡಬೇಡ ನಮ್ಮ ಶುನಕಗೆ ತಳಿಗೆಯ!
ಆನೆಯ ಮೇಲೆ ಹೋಹನ ಶ್ವಾನ ಕಚ್ಚಬಲ್ಲುದೆ, ಅಯ್ಯಾ ?
ಎಮಗೆಮ್ಮ ಕೂಡಲಸಂಗಮದೇವನುಳ್ಳನಕ ?

(ಸಂ. ೩೧, ವ. ೪)

೭೫

ಒಡೆಯರುಳ್ಳಾಳಿಂಗೆ ಕೇಡಿಲ್ಲ, ಕಾಣಿರೊ!
ಊರೆನ್ನದೆ ಅಡವಿಯೆನ್ನದೆ, ಆಳನರಸಿ ಬಹ ಆಳಿದರುಂಟೆ ?
ಜೋಳವಾಳಿಂಗೆ ಬಿಜ್ಜಳಂಗೆ ಆಳಾದಡೇನು ?
ವೇಳೆವಾಳಿಂಗೆ ಕೂಡಿಕೊಂಡಿಪ್ಪ ಕೂಡಲಸಂಗಮದೇವ!

(ಸಂ. ೩೧, ವ. ೫)

೭೬

ನೀನೊಲಿದಡೆ ಕೊರಡು ಕೊನರುವುದು,
ಬರಡು ಹಯನಹುದು.
ನೀನೊಲಿದಡೆ ವಿಷವು ಅಮೃತವಹುದು.
ನೀನೊಲಿದಡೆ ಸಡಿಪದಾರ್ಥವೆಲ್ಲವು
ಇದಿರಲ್ಲಿಪ್ಪವು ಕೂಡಲಸಂಗಮದೇವಾ.

(ಸಂ. ೩೧, ವ. ೬)

೭೭

ಕಂಗಳಿಲ್ಲದ ನೋಟ, ಲಿಂಗವಿಲ್ಲದ ಮಾಟ,
ಜಂಗಮವಿಲ್ಲದ ಊಟ, ಪ್ರಸಾದವಿಲ್ಲದೆ ಪರ,
ಹಿಂಗಿತ್ತು; ಶಿವಲೋಕವಿನ್ನೆಲ್ಲಿಯದೊ ?
ಲಿಂಗಕ್ಕೆ ಮಾಡಿದ ಬೋನವ ಸಿಂಬಕ ತಿಂಬಂತೆ,

ಹಿಂಗಿತ್ತು; ಶಿವಲೋಕ ಇನ್ನೆಲ್ಲಿಯದೊ ?
ಬಂದ ಸಮಯವನರಿಯದೆ ಉದರವ ಹೊರೆವರ
ಕೂಗಿಡೆ ನರಕದಲ್ಲಿಕ್ಕನೆ ಕೂಡಲಸಂಗಮದೇವ ?

(ಸಂ. ೩೧. ವ. ೭)

೧೮

ಕಂಡ ಕನಸು ನಿಧಾನವ ಕಂಡೆನಯ್ಯಾ,
ಬಿಡಲಾರದ ನಿಧಾನವ ಕಂಡೆನಯ್ಯಾ; ಕಂಡು ಬಿಡಲಾರದಯ್ಯಾ.
ಕೂಡಲಸಂಗಯ್ಯನೆಂಬ ನಿಧಿನಿಧಾನವ ಕಂಡೆನಯ್ಯಾ:
ಕಂಡುಕಂಡು ಬಿಡಲಾರೆನಯ್ಯಾ!

(ಸಂ. ೩೧, ವ. ೮)

೧೯

ಅಂಗೈತಿಂದೆನ್ನ, ಕಂಗಳು ಕೆತ್ತುವದಿಂದು :
ಬಂದರೇಕೆ ಪ್ರಮಥರು ಎನ್ನ ಮನೆಗೆ ?
ಬಂದರೇಕೆ ಪುರಾತನರು ಎನ್ನ ಮನೆಗೆ ?
ಕಂಡಕನಸು ದಿಟವಾಗಿ ಜಂಗಮ ಮನೆಗೆ ಬಂದಡೆ
ಹಿಂಡರ್ಚನೆಯು ಕೂಡಲಸಂಗಯ್ಯಾ ನಿನ್ನ ಮುಂದೆ.

(ಸಂ. ೩೧, ವ. ೯)

೨೦

ಸೂರ್ಯನುದಯವು ತಾವರೆಗೆ ಜೀವಾಳ,
ಚಂದ್ರನುದಯವು ನೈದಿಲೆಗೆ ಜೀವಾಳ,
ಕೂಪರ ಕಾವಿನಲ್ಲಿ ಕೂಟ ಜೀವಾಳ,
ಒಲಿದವರ ಠಾವಿನಲ್ಲಿ ನೋಟ ಜೀವಾಳ,
ಕೂಡಲಸಂಗನ ಶರಣರ ಬರವೆನ್ನ ಪ್ರಾಣದ ಜೀವಾಳ.

(ಸಂ. ೩೧, ವ. ೧೦)

೨೧

ನಿಮ್ಮನೋಡಲೆನ್ನ ಹರಣವಿದ್ದುದು.
ನಿಮ್ಮನಗಲಲೊಡನೆ ಎನ್ನ ಹರಣವೆಲ್ಲಿಯದೊ ?
ಇರುಳಿಹುದು ಒಂದು ಜುಗ ಮೇಲೆ ಕೆಡೆದಂತೆ.
ಹಗಲನಾವಪರಿಯೊಳಾಳವಾಡುವೆನಯ್ಯಾ ?
ಕೂಡಲಸಂಗನ ಶರಣರನಗಲುವ ಧಾವತಿಗಿಂತ
ಮರಣವೇ ಲೇಸಯ್ಯಾ.

(ಸಂ. ೩೧, ವ. ೧೧)

೭೨

ನಂಬಿದಡೆ ಪ್ರಸಾದ, ನಂಬದಿರ್ದಡೆ ವಿಷವು.
ತುಡುಕಬಾರದು ನೋಡಾ ಲಿಂಗಪ್ರಸಾದ.
ಕೂಡಲಸಂಗಮನ ಪ್ರಸಾದ ಸಿಂಗಿ ಕಾಳಕೂಟ ವಿಷವು.

(ಸಂ. ೩೩, ವ. ೧)

೭೩

ಹೋಗಬಿಟ್ಟು. ಹಿಂತಿರುಗಿ ನೋಡಿ
ಆಗಬೇಕೆಂಬ ಸಂದೇಹವುಳ್ಳಡೆ
ಪರದಾರ ನಾಯಕನರಕ, ಪರದಾರ ಪಂಚಮಹಾಪಾತಕ!
ಅನ್ಯಸ್ತ್ರೀಯೆಂಬುದೆ ನಿಮ್ಮ ರಾಣಿವಾಸ,
ಎನಗಿದೇ ದಿವ್ಯ ಕೂಡಲಸಂಗಮದೇವಾ.

(ಸಂ. ೩೪, ವ. ೧)

೭೪

ಸದಾಚಾರವ ಕಂಡು, ಲಾಂಛನಪಕ್ಷವ ನೋಡದವರಿಗೆ
ಇಹದೊಳು ಪರದೊಳು ಗತಿಯಿಲ್ಲ ಗತಿಯಿಲ್ಲ ಕಾಣಿರೋ
ಮಣ್ಣೆತ್ತಾದಡೇನು ?
ತನ್ನೆತ್ತೇ ಗೆಲಬೇಕೆಂಬುದಕ್ಕೊಲಿವನು
ನಮ್ಮ ಕೂಡಲಸಂಗಮದೇವನು.

(ಸಂ. ೩೫, ವ. ೧)

೭೫

ಕುಂಡಲಿಗನೊಂದು ಕೀಟತಂದು
ತನ್ನಂತೆ ಮಾಡಿತಲ್ಲಾ !
ಎಲೆ ಮಾನವ ಕೇಳಿ ನಂಬಯ್ಯಾ
ನೋಡಿ ನಂಬಯ್ಯಾ, ಎಲೆ ಮಾನವಾ.
"ತ್ವಚ್ಚಿಂತಯಾ ಮಹಾದೇವ ತ್ವಾಮೇವಾಸ್ಮಿನ ಸಂಶಯಃ ।
ಭ್ರಮದ್ಭ್ರಮರ ಚಿಂತಾಯಾಂ ಕೀಟೋಽಪಿ ಭ್ರಮರಾಯತೇ" ॥

ಕೂಡಲಸಂಗನ ಶರಣರ ಅನುಭಾವ
ಇದರಿಂದ ಕಿರುಕುಳವೆ, ಎಲೆ ಮಾನವಾ ?

(ಸಂ. ೩೮, ವ. ೧)

೭೬

ಮಣ್ಣು ಮಡಕೆಯಾಗಿ, ಮರಳಿ ಮಣ್ಣಾಯಿತೆ ಕ್ರೀಯಳಿದು ?
ಬೆಣ್ಣೆ ತುಪ್ಪವಾಗಿ, ಮರಳಿ ಬೆಣ್ಣೆಯಾಯಿತೆ ಕ್ರೀಯಳಿದು ?
ನೀರು ಮುತ್ತಾಗಿ, ಮರಳಿ ನೀರಾಯಿತೆ ಕ್ರೀಯಳಿದು ?
ಕಬ್ಬಿಣ ಹೊನ್ನಾಗಿ, ಮರಳಿ ಕಬ್ಬಿಣವಾಯಿತೆ ಕ್ರೀಯಳಿದು ?
ನಮ್ಮ ಕೂಡಲಸಂಗನ ಶರಣರಾಗಿ,
ಮರಳಿ ಮಾನವರಹರೆ ಕ್ರೀಯಳಿದು ?

(ಸಂ. ೩೮, ವ. ೨)

೭೭

ಬಂದೆನೆಂದು ಬಾರದಿರ್ದಡೆ,
ಬಟ್ಟೆಗಳ ನೋಡುತಿರ್ದೆ. ಆರನಟ್ಟುವೆನಯ್ಯಾ ?
ಆರ ಕಾಲ ಪಿಡಿವೆನಿನ್ನಾರನಟ್ಟುವೆನಯ್ಯಾ ?
ಕೂಡಲಸಂಗಯ್ಯ ಬಾರದಿರ್ದಡೆ
ಅಟ್ಟುವೆನೆನ್ನ ಪ್ರಾಣವನು,

(ಸಂ. ೩೯, ವ. ೧)

೭೮

*ಅಂಜದಿರು ಅಳುಕದಿರು ಕುಂದದಿರು ಕುಸಿಯದಿರು.
ಏನೊ ಎಂತೊ ಎಂದು ಎನಲಾಗದೆ ಅಯ್ಯಾ ?
ಕೂಡಲಸಂಗಮದೇವ, ಮೌನವೇ ಮಗನೊಡನೆ ?

(ಸಂ. ೩೯, ವ. ೨)

೭೯

ಅಯ್ಯಾ ಅಯ್ಯಾ ಎಂದು ಕರೆಯುತ್ತಿದ್ದೇನೆ;
ಓಯೆನಲಾಗದೇ ಅಯ್ಯಾ ?
ಆವಾಗಲೂ ನಿಮ್ಮ ಅಯ್ಯಾ ಎಂದು ಒರಲುತ್ತಲಿದ್ದೇನೆ;
ನೆನಹಿನಲಿಪ್ಪವಂಗೆ ಮೌನವೇ ಕೂಡಲಸಂಗಯ್ಯಾ

(ಸಂ. ೩೯, ವ. ೩)

* ಮುದ್ರಿತ ಸಿಂ.ಪು.ದಲ್ಲಿ ೭೮ ಹಾಗೂ ೭೯ನೆಯ ವಚನಗಳನ್ನು ಒಂದೇ ವಚನವೆಂದು ಮುದ್ರಿಸಲಾಗಿದೆ. ಆದರೆ ಇವು ಎರಡೂ ಪ್ರತ್ಯೇಕ ವಚನಗಳು (ಸಂ.)

೮೦

ದರ್ಪಣವು ಬೇರೆ ಕಂಚಲ್ಲ, ಬಟ್ಟಲು ಬೇರೆ ಕಂಚಲ್ಲ.
ಭಾಂಡ ಒಂದೆ ಭಾಜನ ಬೇರೆ;
ಬೆಳಗೆ ಕನ್ನಡಿಯೆನಿಸಿತಯ್ಯಾ.
ಅರಿದಡೆ ಶರಣನು. ಮರೆದಡೆ ಮಾನವ.
ಮರೆಯದೆ ಪೂಜಿಸು ಕೂಡಲಸಂಗನ.

(ಸಂ. ೪೨. ವ. ೧)

೮೧

ಕೋಡಗನೇಡಿಸಬೇಡವೆಂದರೆ ಮಾಣದು.
ತೋಡುವ ಹೆಗ್ಗಣ ಮಾಳಿಗೆಯೆಂದರೆ ಮಾಣದು,
ಗಾಡಿಗದೂಷಕರಾಡಬೇಡವೆಂದಡೆ ಮಾಣರು.
ಕೂಡಲಸಂಗಮದೇವ ಕೇಡುಗ ತಾನಲ್ಲ.
ಆಡುವ ಅಜ್ಞಾನಿಗಳಿಗೆ ಕಾಯಕವಯ್ಯಾ.

(ಸಂ. ೪೨. ವ. ೨)

೮೨

ಅಂತರಂಗ ಬಹಿರಂಗ ಆತ್ಮಸಂಗ ಒಂದೇ ಅಯ್ಯಾ.
ನಾದಬಿಂದುಕಳಾತೀತ, ಆದಿ ಆಧಾರ ಒಂದೆ ಅಯ್ಯಾ.
ಆರೂಢದಲ್ಲಿ ಕೂಡಿದ ಸುಖವನು
ಕೂಡಲಸಂಗಯ್ಯ ತಾನೆ ಬಲ್ಲ!

(ಸಂ. ೪೫, ವ. ೧)

೮೩

ಕರ್ಮವೆಂಬ ಕಳನೊಳು ತೊಡರಿದೆ;
ಬಿನ್ನಪವನಧಾರು!
ನಿಮ್ಮಾಳಿನ ಭಾಷೆಯ ಕಡೆಗಳಕೆ ನೂಕುವೆನು, ಕೆಡಹುವೆನು ಅಂಕವನು.
ನಡುವೆ ಓಸರಿಸಿದಡೆ ನಿಮ್ಮಾಳಾನಲ್ಲ;
ಕರೆದೊಡೆ ಓ ಎನಿಸದಿದ್ದಡೆ ನಿಮ್ಮಾಳಾನಲ್ಲ.
ಶಿವನೆಂಬ ದಂಡೆಯನೊಡ್ಡಿ
ಗಣಮೇಳಾಪವೆಂಬಲಗಿನಲ್ಲಿರಿವೆ, ಕೂಡಲಸಂಗಮದೇವಾ.

(ಸಂ. ೪೮, ವ. ೧)

●

೮೪

ಬ್ರಹ್ಮ ವಿಷ್ಣುಗಳ ಮಾಯೆ ತೊತ್ತಳದುಳಿವಂದು,
ದೇವ ದಾನವರ ಮಾಯೆ ಅಗಿದಗಿದು ತಿಂಬಂದು,
ರುದ್ರಗಣ ಪ್ರಮಥಗಣರೆಂಬರ
ಮಾಯೆ ಮರುಳ್ಮಾಡಿ ಕಾಡುವಂದು.
ನೊಸಲಕಣ್ಣು ಪಂಚಮುಖ ದಶಭುಜದವರಿಗೆ
ಮಾಯೆಯರ್ಧಾಂಗಿಯಾದಂದು,
ಅಷ್ಟಾಶೀತಿ ಸಹಸ್ರ ಋಷಿಗಳ
ಮಾಯೆ ತಪೋಮದದಲಿ ಕೆಡಹುವಂದು
ನಾನು ಮಾಯಾಕೋಳಾಹಳನಾಗಿರ್ದೆ ಕಾಣಾ ಗುಹೇಶ್ವರಾ.

(ಗತಿ. ೨. ವ. ೧)

೮೫

ದೇವರೆಲ್ಲರ ಹೊಡೆತಂದು ದೇವಿಯರೊಳಗೆ ಕೂಡಿತ್ತು.
ಹರಹರಾ, ಮಾಯೆ ಇದ್ದೆಡೆಯ ನೋಡಾ,
ಶಿವಶಿವಾ, ಮಾಯೆಯಿದ್ದೆಡೆಯ ನೋಡಾ.
ಎರಡೆಂಬತ್ತು ಕೋಟಿ ಪ್ರಮಥಗಣಂಗಳು
ಅಂಗಾಲ ಕಣ್ಣವರು, ಮೈಯೆಲ್ಲ ಕಣ್ಣವರು,
ನಂದಿವಾಹನ ರುದ್ರರು—
ಇವರೆಲ್ಲರೂ ಮಾಯೆಯ ಕಾಲುಗಾಹಿನ ಸರವಾಲೆ
ಕಾಣಾ ಗುಹೇಶ್ವರಾ.

(ಗ. ೩, ವ. ೧)

೮೬

ಬ್ರಹ್ಮ ಘನವೆಂಬೆನೆ, ಬ್ರಹ್ಮನ ನುಂಗಿತ್ತು ಮಾಯೆ!
ವಿಷ್ಣು ಘನವೆಂಬೆನೆ, ವಿಷ್ಣುವ ನುಂಗಿತ್ತು ಮಾಯೆ!
ರುದ್ರ ಘನವೆಂಬೆನೆ, ರುದ್ರನ ನುಂಗಿತ್ತು ಮಾಯೆ!
ತಾ ಘನವೆಂಬೆನೆ, ತನ್ನ ತಾ ನುಂಗಿತ್ತು ಮಾಯೆ!
ಸರ್ವವೂ ನಿಮ್ಮ ಮಾಯೆ!
ಒಬ್ಬರನೊಳಕೊಂಡಿತ್ತೆ ಹೇಳಾ ಗುಹೇಶ್ವರಾ ?

(ಗ. ೩, ವ. ೨)

೮೭

ಊರದ ಚೇಳಿಂಗೆ ಏರದ ವಿಷಕ್ಕೆ
ನೆರಳಿ ಹೊರಳಿತ್ತು ಮೂರು ಲೋಕ.
ಹುಟ್ಟದ ಗಿಡುವಿನ ಬಿಟ್ಟಲೆಯ ತಂದು
ಮುಟ್ಟದೆ ಪೂಜಿಸೆಂದ ನಮ್ಮ ಗುಹೇಶ್ವರಾ.

(ಗ. ೪, ವ. ೧)

೮೮

ಲಿಂಗವನರಿತು ಲಿಂಗಾರ್ಚನೆಯ ಮಾಡಿ
ಗುರುಲಿಂಗ ಜಂಗಮಕ್ಕೆ ತನುಮನಧನವ ಸವೆಸಿ
ಲಿಂಗವಲ್ಲದನ್ಯವನರಿಯದಿರ್ಪ
ಮಹಾಮಹಿಮನ ನಿಲವು ಸರ್ವಾಂಗಲಿಂಗಮೂರ್ತಿ.
ಆತನ ನುಡಿಯೇ ವೇದ, ನಡೆಯೇ ಆಗಮ;
ಮಾಡಿತ್ತೇ ಶಾಸ್ತ್ರ, ಹೇಳಿತ್ತೇ ಪುರಾಣ,
ಆತನಿದ್ದುದೇ ದೇವಲೋಕ;
ಆತನ ದರ್ಶನ ಸ್ಪರ್ಶನದಿಂದ ಪಾಪಕ್ಷಯ;
ಆತನ ಪಾದತೀರ್ಥಪ್ರಸಾದದಿಂದ ಸಕಲರೂ ಜೀವನ್ಮುಕ್ತರು.
ಆ ಮಹಾಮಹಿಮನ ಶ್ರುತದೃಷ್ಟಾನುಮಾನದಿಂದ
ವಿಚಾರಿಸಿ ನೋಡಿದರೆ, ಬಸವರಾಜದೇವರು ಮೊದಲಾದ
ಪುರಾತನರ ಚಾರಿತ್ರವು ಹೀಂಗೆ ಸರಿ;
ಲಿಂಗವನರಿಯದೆ ಲಿಂಗಾರ್ಚನೆಯ ಮಾಡದೆ
ಗುರುಲಿಂಗಜಂಗಮಕ್ಕೆ ತನುಮನಧನವ ಸವೆಸದೆ
ಇನ್ನು, ಆವನಾನೊಬ್ಬನು ವೇದಾದಿ
ಅಷ್ಟಾದಶಪುರಾಣಂಗಳನೋದಿ
ಹೇಳಿ ಕೇಳಿದಡೇನೊ ಗಿಳಿಯೋದಿದಂತೆ ?
ಸರ್ವಸಂಗ ಪರಿತ್ಯಾಗವ ಮಾಡಿ
ಅರಣ್ಯದಲ್ಲಿ ಚರಿಸಿದಡೇನೊ ವನಚರವ್ಯಾಧನಂತೆ ?
ಅಶನವ ಬಿಟ್ಟಡೇನೊ ಪರಾಕಿಯಂತೆ ?
ವಿಷಯವ ಬಿಟ್ಟಡೇನೊ ನಪುಂಸಕನಂತ ?
ನಿದ್ರೆಯಬಿಟ್ಟಡೇನೊ ಜಾರಚೋರರಂತೆ!
ಸಾಮರ್ಥ್ಯಪುರುಷನೆಂದು ಖೇತರತ್ವದಲ್ಲಿ

ಬಂದರೇನೊ ಪಕ್ಷಿಗಳಂತೆ!
ಜಲದಲ್ಲಿ ಚರಿಸಿದಡೇನೊ ಮತ್ಸ್ಯಾದಿಗಳಂತೆ?
ಭೂಪ್ರದಕ್ಷಿಣೆ ಮಾಡಿ ಬಂದಡೇನೊ ಮೃಗಾದಿಗಳಂತೆ ?
ದಾನಾದಿಗಳ ಕೊಟ್ಟಡೇನೊ ಕ್ಷತ್ರಿಯರಂತೆ ?
ಸಾಕ್ಷಿ;
"ಪಯೋಹಾರೇತು ಮಾರ್ಜಾಲೋ ನಗ್ನೋ ಮುಗ್ಧಃ ಪಿಶಾಚವತ್
ನಿತ್ಯಸ್ನಾನಶ್ಚ ಕಾಕಶ್ಚ ವಾಲ್ಮಿಕಾಃ ಸರ್ವಜಾತಯು:
ತೃಣಂ ಭಕ್ಷ್ಯಂತಿ ಪಶವಃ ವನವಾಸೀ ಮೃಗಸ್ತಥಾ
ಯೇನ್ತ್ರ ಚೈತಾನಿ ಕಾರ್ಯ್ಯಾಣಿ ನ ಕರೋತಿ ಹಿ ಪಾರ್ವತೀ" ॥
ಎಂದುದಾಗಿ, ಆವ ಸಿದ್ಧಿಗಳಿಂದಲೂ ಫಲವಿಲ್ಲ;
ಇಂತೀ ಏನನೋದಿ ಏನಕೇಳಿ ಏನಹೇಳಿಯೂ ಫಲವಿಲ್ಲ.
ಇವು ಭಕ್ತಿಯೊಳಗಲ್ಲ, ಮುಕ್ತಿಗೆ ಸಲ್ಲವು.
ಇದನರಿದು ಆವನಾನೊಬ್ಬನು ಲಿಂಗವರಿತು,
ಲಿಂಗಾರ್ಚನೆಯಂ ಮಾಡಿ
ಗುರುಲಿಂಗಜಂಗಮಕ್ಕೆ ತನುಮನಧನವ ಸವೆಸಿಡಡೆ
ಅದೇ ಚಲ್ವ ಭಕ್ತಿ, ಅದೇ ಚಲ್ವ ಮುಕ್ತಿ,
ಅದೇ ಸರ್ವಸಿದ್ಧಿ; ಅದೇ ಸರ್ವಕಾರಣವಯ್ಯಾ
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

(ಗ. ೪. ವ. ೨)

೮೯

ಕಡಲ ನುಂಗಿದ ಕಪ್ಪಿನ ಪರಿ
ನವಸಾಸಿರ ಸಿಡಿಲು ಹೊಯ್ದು ಬಯಲಿಂಗೆ ಬಣ್ಣವುಂಟೆ ?
ಕಂಗಳ ಮುಂದಣ ಕನಸು,
ಹಿಂಗಿದ ತುಂಬಿಯ ಪರಿಮಳ!
ಅಂಗವಿಲ್ಲದ ರೂಹಿಂಗೆ ಸಂಗವುಂಟೆ ?
ಇದೇನೊ ಗಗನದ ಹಣ್ಣನೆ ಕೊಯ್ದು
ಮುಗುದೆ ರುಚಿಯನರಿಯಳು.
ಹಗರಣದಹಮ್ಮಾವಿನ ಹಯನು
ಸಯುವಪ್ಪುದೆ ಗುಹೇಶ್ವರಾ ?

(ಗ. ೫. ವ. ೧)

---

೧-೧ × (ಮೂ).

೯೦

ಕೃತಯುಗದಲ್ಲಿ ಭಕ್ತಿಕಾರಣ
ಸ್ಥೂಲಕಾಯನೆಂಬ ಗಣೇಶ್ವರನಾಗಿರ್ದೆ,
ತ್ರೇತಾಯುಗದಲ್ಲಿ ಭಕ್ತಿಕಾರಣ
ಶೂನ್ಯಕಾಯನೆಂಬ ಗಣೇಶ್ವರನಾಗಿರ್ದೆ.
ದ್ವಾಪರದಲ್ಲಿ ಭಕ್ತಿಕಾರಣ
ಅನಿಮಿಷನೆಂಬ ಗಣೇಶ್ವರನಾಗಿರ್ದೆ
ಕಲಿಯುಗದಲ್ಲಿ [ನಾನು] ಭಕ್ತಿ ಕಾರಣ
ಪ್ರಭುವೆಂಬ ಜಂಗಮನಾಗಿರ್ದೆ ಕಾಣಾ ಗುಹೇಶ್ವರಾ.

(ಗ. ೬, ವ. ೧)

೯೧

ಆದಿಯಾಧಾರವಿಲ್ಲದಂದು, ಹಮ್ಮುಬಿಮ್ಮುಗಳಿಲ್ಲದಂದು,
ಸುರಾಳ ನಿರಾಳವಿಲ್ಲದಂದು, ಶೂನ್ಯ ನಿಃಶೂನ್ಯವಿಲ್ಲದಂದು,
ಸಚರಾಚರವೆಲ್ಲ ರಚನೆಗೆ ಬಾರದಂದು
ಗುಹೇಶ್ವರನ ಶರಣನುದಯಿಸಿದನಂದು!

(ಗ. ೬, ವ. ೧)

೯೨

ಆದಿಯ ಸಂಗದಿಂದಾಪವನಲ್ಲ,
ಸಂಗಸುಖದೊಳಗಿದ್ದವನಲ್ಲ,
ಇಬ್ಬರ ಸಂಗದಿಂದಾದವನಲ್ಲ,
ರವಿಶಶಿಯ ಬೆಳಗಿನಿಂದ ಬೆಳೆದವನಲ್ಲ,
ನಾದಬಿಂದುಕಳೆ ಹುಟ್ಟದ ಮುನ್ನ ಅಲ್ಲಿಂದತ್ತ ಗುಹೇಶ್ವರ[1]

(ಗ. ೬, ವ. ೩)

೯೩

ಕರೆಯದೆ ಬಂದುದ, ಹೇಳದೆ ಹೋದುದನಾರು ಬಲ್ಲರು ?
ಅಂದಂದಿಗೆ ಬಂದ ಪ್ರಾಣಿಗಳಾರೂ ಅರಿಯರಲ್ಲಾ!
ಬಂದ ಬಂದವರೆಲ್ಲ ಮಿಂದುಂಡು ಹೋದರು;
ಗುಹೇಶ್ವರಲ್ಲಯ್ಯನುಣ್ಣದೆ ಹೋದುದನಾರೂ ಅರಿಯರಲ್ಲಾ!

(ಗ. ೭, ವ. ೧)

---

೧ + ನಿಮ್ಮ ಶರಣ (ಅ. ಪ್ರ. ವ-೨೨೩೫)

೯೪

§ಬ್ರಹ್ಮ ವಿಷ್ಣುಗಳ ಮಾಯೆ ತೊತ್ತಳದುಳಿವಂದು,
ದೇವದಾನವರ ಮಾಯೆ ಅಗಿದಗಿದು ತಿಂಬಂದು,
ರುದ್ರಗಣ ಪ್ರಮಥಗಣರೆಂಬರ
ಮಾಯೆ ಮರುಳ್ಮಾಡಿ ಕಾಡುವಂದು,
ನೊಸಲಕಣ್ಣು ಪಂಚಮುಖ ದಶಭುಜದವರಿಗೆ
ಮಾಯೆಯರ್ಧಾಂಗಿಯಾಗದಂದು,
ಅಷ್ಟಾಶೀತಿಸಹಸ್ರಋಷಿಗಳ
ಮಾಯೆ ತಪೋಮದದಲಿ ಕೆಡಹುವಂದು
ನಾನು ಮಾಯಾಕೋಳಾಹಳನಾಗಿರ್ದೆ ಕಾಣಾ ಗುಹೇಶ್ವರಾ.

(ಗ-೭, ವ. ೨)

೯೫

ಭಾವಗೆಟ್ಟನು ಭವಗೆಟ್ಟನು ಒಡಹುಟ್ಟಿದೈವರ ಕೈಬಿಟ್ಟನು.
ಭಂಡನು ಲಜ್ಜೆಭಂಡನು; ಕಂಡರೆ ನುಡಿಸದಿರಾ ಮಾಯಾದೇವಿ!
ಅರಿವೆಯನುಟ್ಟನು ನೆರೆ ಮರುಳಾದನು,
ಹುಟ್ಟು ಮುರಿದನು ಮಡಿಕೆಯನೊಡೆದನು.
ಆದಿ ಪುರಾತನು ಅಚಲಲಿಂಗೈಕ್ಯನು.
ಗುಹೇಶ್ವರಲ್ಲಯ್ಯಂಗೆ ಮೂಗಿಲ್ಲ ಮರುಳೆ!

(ಗ. ೭. ವ. ೩)

೯೬

ಪ್ರಥಮ ಕಾಲದಲ್ಲಿ ದೇವಗಣ ಮಹಾಗಣ
ಸುರಗಣ ಕಿನ್ನರಗಣ ಸಹಿತ
ಸನ್ನಹಿತನು ನಮ್ಮ ಬಸವಣ್ಣನು.
ಗಣಪ್ರಸಾದಿಯಾಗಿ ಮರ್ತ್ಯಲೋಕಕ್ಕೆ ಮಹವತಂದು
ಶಿವಗಣವ ಮಾಡಿದಾತನು ನಮ್ಮ ಬಸವಣ್ಣನು.
ಸ್ವರೂಪಸಾರಾಯವನು ಪದಾರ್ಥವೆಂದಾತನು ನಮ್ಮಬಸವಣ್ಣನು.
ಕಲಿದೇವರದೇವಾ,
ನಿಮ್ಮ ಶರಣ ಬಸವಣ್ಣನಿಂದಾನು ಬದುಕಿದೆನು.

(ಗತಿ. ೮. ವ. ೧)

---

§ ಈ ವಚನ ಗತಿ ೨ ರಲ್ಲೂ ಬಂದಿದೆ :ನೋಡಿ ವಚನ ೮೪.

೯೭

ಮಾರಾರಿಯ ಬೆಸನದಿಂದ ಧಾರುಣಿಗೆ ಬಸವನವತರಿಸಿ
ಸಾರಾಯ ಸದ್ಭಕ್ತಿಯನು ತೋರಿದನು ಶರಣರಿಗೆಲ್ಲ.
ಭಕ್ತಿಯ ಸಂಚವ ಮುಕ್ತಿಯ ಭೇದವ
ಸತ್ಯಶರಣರಿಗೆಲ್ಲ ಉಪದೇಶವ ಮಾಡಿ
ನಿತ್ಯಲಿಂಗಾರ್ಚನೆಯೊಳಗೆನ್ನನಿರಿಸಿ
ರಕ್ಷಿಸಿದಾತ ಬಸವಣ್ಣ ಕಾಣಾ, ಕಲಿದೇವರದೇವಾ.

(ಗ. ೮, ವ. ೨)

೯೮

ಪ್ರಾಣಲಿಂಗದ ಪೂವಾಶ್ರಯವ ಕಳೆಯುಲೆಂದು ಲಿಂಗಪ್ರಾಣಿಯಾದ.
ಲಾಂಛನದ ಪೂರ್ವಾಶ್ರಯವ ಕಳೆಯಲೆಂದು ಜಂಗಪ್ರಾಣಿಯಾದ.
ಪ್ರಸಾದದ ಪೂರ್ವಾಶ್ರಯವ ಕಳೆಯಲೆಂದು ಮಹಾಪ್ರಸಾದಿಯಾದ.
ಇಂತೀ ತ್ರಿವಿಧದ ಪೂರ್ವಾಶ್ರಯವ ಕಳೆಯಲೆಂದು
ಬಸವಣ್ಣ ಮರ್ತ್ಯಕ್ಕೆ ಬಂದ ಕಾಣಾ, ಗುಹೇಶ್ವರಾ.

(ಗ-೯, ವ.೧)

೯೯

ಮುಡಿಬಿಟ್ಟು ಮೊಗಬಾಡಿ ತನುಕರಗಿದವಳ
ಎನ್ನನೇಕೆ ನುಡಿಸುವಿರಿ ಎಲೆ ಅಣ್ಣಗಳಿರಾ ?
ಎನ್ನನೇಕೆ ನುಡಿಸುವಿರಿ ಎಲೆ ತಂದೆಗಳಿರಾ ?
ಬಲುಹಳಿದು ಭವಗೆಟ್ಟು ಛಲವಳಿದು ಭಕ್ತೆಯಾಗಿ
ಚೆನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳ.

(ಗ. ೧೦, ವ. ೧)

೧೦೦

ಎರದ ಮುಳ್ಳಿನಂತೆ ಪರಗಂಡರೆನಗವ್ವಾ.
ಸೋಂಕಲಮ್ಮೆ ಸುಳಿಯಲಮ್ಮೆ:
ನಂಬಿ ನಚ್ಚಿ ಮಾತಾಡಲಮ್ಮೆನವ್ವಾ.
ಚೆನ್ನಮಲ್ಲಿಕಾರ್ಜುನನಲ್ಲದ ಗಂಡರ ಉದರದಲ್ಲಿ
ಮುಳ್ಳುಂಟೆಂದು ಅನಪ್ಪಲಮ್ಮೆನವ್ವಾ.

(ಗ. ೧೦, ವ. ೨)

೧೦೧

ಕಾಯ ಕರ್ರನೆ ಕಂದಿದಡೇನಯ್ಯಾ ?
ಕಾಯ ಮಿರ್ರನೆ ಮಿಂಚಿದಡೇನಯ್ಯಾ ?
ಅಂತರಂಗ ಶುದ್ಧವಾದ ಬಳಿಕ
ಕಾಯವೇನಾದಡೆ ನಿಮಗೇನಯ್ಯಾ ?
ಚೆನ್ನಮಲ್ಲಿಕಾರ್ಜುನನೊಲಿದ ಕಾಯ
ಏನಾದಡೆ ನಿಮಗೇನಯ್ಯಾ ?

(ಗ. ೧೦, ವ. ೩)

೧೦೨

ಎರೆಯಂತೆ ಕರಕರಗಿ, ಮಳಲಂತೆ ಜರಿಜರಿದು
ಕನಸಿನಲಿ ಕಳವಳಿಸಿ ಆನು ಬೆರಗಾದೆ.
ಆವಿಗೆಯ ಕಿಚ್ಚಿನಂತೆ ಸುಳಿಸುಳಿದು ಬೆಂದೆ.
ಆಪತ್ತಿನ ಸಖಿಯರನಿನ್ನಾರನು ಕಾಣೆ.
ಅರಸಿ ಕಾಣದನುವ ಬೆರಸಿ ಕೂಡದ ಸುಖವ
ಎನಗೆ ನೀ ಕರುಣಿಸು, ಚೆನ್ನಮಲ್ಲಿಕಾರ್ಜುನಾ.

(ಗ. ೧೦, ವ. ೪)

೧೦೩

ಕಾಣದುದನರಸುವರಲ್ಲದೆ ಕಂಡುದನರಸುವರೆ ?
ಘನಕೆ ಘನವಾದ ವಸ್ತು,
ತಾನೆ ಗುರುವಾದ ತಾನೆ ಲಿಂಗವಾದ,
ತಾನೆ ಜಂಗಮವಾದ, ತಾನೆ ಮಂತ್ರವಾದ,
ತಾನೆ ತಂತ್ರವಾದ, ತಾನೆ ಸಕಲವಿದ್ಯಾಸ್ವರೂಪವಾದ.
ತಾನೆ ಇಂತಿವನೆಲ್ಲವನೊಳಕೊಂಡು
ಎನ್ನ ಕರಸ್ಥಲಕ್ಕೆ ಬಂದು ನಿಂದ ನಿರ್ವಿಕಾರ ಗುಹೇಶ್ವರ.

(ಗ-೧೧, ವ. ೧)

೧೦೪

ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ
ಮಲತ್ರಯಂಗಳಂ ಕಳೆದುಳಿದು ನಿರ್ಮಲವಾದ ಶಿಷ್ಯನು,
ಕಾಯ-ಜೀವದ ಭ್ರಾಂತು ಸೂತಕವ ವಿವರಿಸಿ ಕಳೆದು
ನಿಶ್ಶಂಕನಾದ ಗುರು-

ಉಭಯ ಭಾವದೊಳಗೆ ಆವುದು ಮುಂದು
ಆವುದು ಹಿಂದು ಎಂದರಿಯಬಹುದೆ ?
ಕರಸ್ಥಲಕ್ಕೆ ಕಾರುಣ್ಯವಮಾಡಿದಡೆ ಮನಸ್ಥಲಕ್ಕೆ ಹಂಗಿಲ್ಲ.
ಮನಸ್ಥಲದಲ್ಲಿ ಸೆರಗೊಡ್ಡಿ ಬೇಡಿದಡೆ
ಕರಸ್ಥಲದ ಲಿಂಗ ಕೈಸಾರಿತು!
ಗುರುಸ್ಥಲದ ನಿಲವು ಪರಸ್ಥಲದಲಡಗಿದಡೆ
ಭಾವ[೧]ಬೆರಗಾಯಿತ್ತು ಕಾಣಾ[೨], ಗುಹೇಶ್ವರಾ!

(ಗ. ೧೧, ವ. ೨)

೧೦೫

ಮುಕ್ತಿಗೆ ಮುಖವಾಗಿ, ಯುಕ್ತಿಗೆ ಹೊರಗಾಗಿ ಇಪ್ಪಭೇದವು,
ಅರಿವಿಂಗೆ ಅರಿವಾಗಿಪ್ಪ ಭೇದ
ಎನಗೆ ಕಾಣಬಂದಿತ್ತು, ನೋಡಾ!
ನಿನ್ನೊಳಗಾನೊರೆದು ನೋಡಿದಡೆ
ಒರೆಯಿಲ್ಲದ ಚಿನ್ನದ ಪರಿಯಲೆನ್ನ ಮನವನಾವರಿಸಿ
ಪರಮ ಸುಖದ ಪರಿಣಾಮ ಒಳಕೊಂಡಿತ್ತು, ನೋಡಾ!
ಈ ಕುರುಹಿನ ಮೊಳೆಯ ಒರಿಯ ಬಯಲಲಿ
ನಿಲಿಸಿದ ನಿಲವ ನೋಡಿ ಕೂಡಾ,
ನಮ್ಮ ಗುಹೇಶ್ವರ ಶರಣ ಅಜಗಣ್ಣನೊಳಗೆ
ನೀನು ನಿರಾಳ ಸಂಗಿಯಾಗಿ.

(ಗ ೧೨, ವ. ೧)

೧೦೬

ದೇವ ದೇವಾ, ಶರಣಾರ್ಥಿ; ಅವಧರಿಸಯ್ಯಾ.
ಕೇಳಿದ ಸುಖ ಕಿವಿಗೆ ಬೇಟವಾಯಿತ್ತು.
ಕಿವಿಗಳ ಬೇಟ ಕಂಗಳ ಮುಂದೆ ಮೂರ್ತಿಗೊಂಡಿತ್ತು.
ಕಂಗಳ ಮುಂದೆ ಕಂಡ ಸುಖ ಮನಕ್ಕೆ ವೇದ್ಯವಾಯಿತ್ತು.
ಘನಮಹಿಮರ ದರುಶನದ ಸುಖವ ನೆನೆದು
ಮರಣವ ಗೆಲಿದು ಮಹವನೊಡಗೂಡಿ

---

೧-೨ ಬಳಲಿತ್ತಿದೇನೊ (ಅ. ಪ್ರ. ವ-೭೬೨)

ಎನ್ನ ಅಜಗಣ್ಣನನಗಲಿದ ದುಃಖ
ನಿಮ್ಮ ಸಂಗದಲ್ಲಿ ಸಯಗೆಟ್ಟು
ಸುಖಿಯಾದೆನಯ್ಯಾ ಪ್ರಭುವೆ.

(ಗ. ೧೨. ವ. ೨)

೧೦೭

ಕಳ್ಳಗಂಜಿ ಕಾಡ ಹೊಕ್ಕರೆ ಹುಲಿ ತಿಂಬುದು; ಮಾಬುದೆ ?
ಹುಲಿಗಂಜಿ ಹುತ್ತ ಹೊಕ್ಕರೆ ಸರ್ಪ ತಿಂಬುದು; ಮಾಬುದೆ ?
ಸರ್ಪಗಂಜಿ ಸಮುದ್ರ ಹೊಕ್ಕರೆ ನೆಗಳೆ ತಿಂಬುದು; ಮಾಬುದೆ ?
ಕಾಲಕ್ಕಂಜಿ ಭಕ್ತನಾದರೆ ಕರ್ಮತಿಂಬುದು; ಮಾಬುದೆ?
ಮೃತ್ಯುವಿನ ಬಾಯ ತುತ್ತಾದ
ವೇಷಡಂಭಕರನೇನೆಂಬೆನಯ್ಯಾ ಗುಹೇಶ್ವರಾ ?

(ಗ ೧೩, ವ. ೧)

೧೦೮

ಅಯ್ಯಾ, ನಿಮ್ಮ ಸರವುಂಡ ಶಬ್ದ
ಎನ್ನ ಮನಕ್ಕೆ ವೇದ್ಯವಾಯಿತ್ತು.
ಅಯ್ಯಾ, ನಿಮ್ಮ ನಿಜವುಂಡ ನಿಲವು
ಎನ್ನ ಮತಿಗೆ ವೇದ್ಯವಾಯಿತ್ತು.
ಅಯ್ಯಾ, ನಿಮ್ಮ ಕರುಣಪ್ರಸಾದ
ಎನ್ನ ಸರ್ವಾಂಗವೇದ್ಯವಾಯಿತ್ತು.
ನಿಮ್ಮ ಕಾಯವಿಡಿದಿಪ್ಪ ಕರಸ್ಥಲವೆಂತು ಹೇಳಾ
ಕಪಿಲಸಿದ್ಧಮಲ್ಲಿನಾಥಾ ?

(ಗ. ೧೩. ವ. ೨)

೧೦೯

ದೇಹಭಾವವಳಿದಲ್ಲದೆ ಜೀವಭಾವವಳಿಯದು.
ಜೀವಭಾವವಳಿದಲ್ಲದೆ ಭಕ್ತಿಭಾವವಳವಡದು.
ಭಕ್ತಿಭಾವವಳವಟ್ಟಲ್ಲದೆ ಅರಿವು ತಲೆದೋರದು.
ಅರಿವು ತಲೆದೋರಿಯಲ್ಲದೆ ಕುರುಹು ನಷ್ಟವಾಗದು.
ಕುರುಹು ನಷ್ಟವಾದಲ್ಲದೆ ಮಾಯೆ ಹಿಂಗದು!
ಇದು ಕಾರಣ,

ಕಾಯದ ಜೀವದ ಹೊಲಿಗೆಯನಳಿವ ಭೇದವ ತಿಳಿಯಬಲ್ಲಡೆ
ಗುಹೇಶ್ವರಲಿಂಗದರಿವು ಬಳಿಕ ಸಾಧ್ಯವಪ್ಪುದು
ಕಾಣಾ ಸಿದ್ಧರಾಮಯ್ಯಾ

(ಗ. ೧೩, ವ. ೩)

೧೧೦

ನೀರು-ಕ್ಷೀರಗಳ ಭೇದವ ಹಂಸೆ ಬಿಚ್ಚುವುದು.
ಜೀವ-ದೇಹಗಳ ಸಂದು ಸಂಚವ ದೇವ ಬಿಚ್ಚುವ.
ನೀವಿಕ್ಕಿದ ತೊಡಕು ಬಿಡಿಸಬಾರದು;
ಬಿಡಿಸಿದ ತೊಡಕ ಮರಳಿಕ್ಕಬಾರದು
ಕಾಣಾ, ಕಪಿಲಸಿದ್ಧಮಲ್ಲಿಕಾರ್ಜುನಾ.

(ಗ. ೧೩, ವ. ೪)

೧೧೧

ಎಲೆ ಅಯ್ಯಾ, ಎನ್ನಹೊತ್ತಿಪ್ಪವಳ
ನೆತ್ತಿಗಣ್ಣೆನಲಿಪ್ಪ ಲಿಂಗವ
ನಾನೆಚ್ಚತ್ತು ನೋಡುವೆನೆಂತಯ್ಯ?
ನೋಡ ಹೋದರೆ ನೆತ್ತಿ ಬಿರಿದು ಕಣ್ಣಾಯಿತ್ತು.
ನೋಡದಿರ್ದಡೆ ಅವಳು ಎನಗೆ ತೋರಳು.
ನಾ ಕಾಬ ತೆರನ ತೋರಾ
ಕಪಿಲಸಿದ್ಧಮಲ್ಲಿನಾಥಾ.

(ಗ. ೧೩, ವ. ೫)

೧೧೨

ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು,
ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು,
ತೊಳಗಿ ಬೆಳಗುತ್ತಿರ್ದುದಯ್ಯಾ ಶಿವನಪ್ರಕಾಶ!
ಆ ಬೆಳಗಿನೊಳಗೊಪ್ಪುತ್ತಿರ್ದರಯ್ಯಾ ಅಸಂಖ್ಯಾತ ಭಕ್ತಮಹಾಗಣಂಗಳು
ಶಿವಭಕ್ತರಿರ್ದ ಕ್ಷೇತ್ರ ಅವಿಮುಕ್ತಕ್ಷೇತ್ರವೆಂಬುದು ಹುಸಿಯೆ ?
ಶಿವಭಕ್ತರಿರ್ದ ದೇಶವು ಪಾವನವೆಂಬುದು ಹುಸಿಯೆ ?
ಗುಹೇಶ್ವರಲಿಂಗದಲ್ಲಿ ಎನ್ನ ಪರಮಾರಾಧ್ಯ
ಸಂಗನಬಸವಣ್ಣನ ಕಂಡು ಬದುಕಿದೆ ಕಾಣಾ, ಸಿದ್ಧರಾಮಯ್ಯಾ.

(ಗ. ೧೪, ವ. ೧)

೧೧೩

ಆದಿಯಾಧಾರವಿಲ್ಲದ ಆಗಮನಾಸ್ತಿಯಾಗಿಪ್ಪ
ಸಂಸಾರ ವಿರಹಿತನನಾರೂ ಅರಿಯರಲ್ಲಾ !
ಹಿಂದೊಂದು ವೃಕ್ಷವು ಅತಿಶಯದ ರೂಪಾಗಿ
ಪೃಥ್ವಿಗಿಂಬಾಗಿರ್ದುದನಾರೂ ಅರಿಯರಲ್ಲಾ !
ಅಂತರಂಗದ ಭುವನಪಸು ಮೆಟ್ಟಿ ನೋಡುತ್ತ
ಬೆಡಗಿನ ತಾವರೆಯ ಮಧ್ಯದ ತಾರಕಿಯನಾರೂ ಅರಿಯರಲ್ಲಾ !
ಇನ ಶಶಿಗಳಿಬ್ಬರೂ ನಯನ ನೋಟದ
ಪುಷ್ಪಪರಿಮಳವಾಗಿರ್ದುದನಾರೂ ಅರಿಯರಲ್ಲಾ !
ಇಂಬು ನಯನದಲ್ಲಿ ಸಂಭ್ರಮವಿಲ್ಲದ ರೂಪು
ಮಹತ್ತಾಗಿರ್ದುದನಾರೂ ಅರಿಯರಲ್ಲಾ !
ಸಾಗರದೊಳಗಣ ಜ್ಯೋತಿಯಂತೆ
ಗುಹೇಶ್ವರಲಿಂಗದೊಳಗೆ ಎನ್ನ ಪರಮಾರಾಧ್ಯ
ಸಂಗನಬಸವಣ್ಣ ನಿಂದ ನಿಲವ
ಉಪಮಿಸಬಾರದು ಕಾಣಾ, ಸಿದ್ಧರಾಮಯ್ಯಾ !

(ಗ. ೧೪, ವ. ೨)

೧೧೪

ಯತ್ರ ಯತ್ರ ಮಹೇಶ್ವರರಿರ್ದ ಗ್ರಾಮ
ತತ್ರ ತತ್ರ ಶಿವಲೋಕ ನೋಡಾ.
ಸತ್ಯರ ವಚನ ತಪ್ಪುವದೇಸಯ್ಯಾ ?
ಕಪಿಲಸಿದ್ಧಮಲ್ಲಿನಾಥಾ, ನಿಮ್ಮ ಶರಣ
ಬಸವಣ್ಣಮೆಟ್ಟಿದ ಧರೆ ಪಾವನವೆಂಬುದು
ಇಂದು ಕಾಣಬಂದಿತಯ್ಯಾ ಪ್ರಭುವೆ.

(ಗ. ೧೪, ವ. ೩)

೧೧೫

ಜಲದಲುದ್ಭವಿಸಿದ ಮುತ್ತು ಜಲವು ತಾನಲ್ಲಾ;
ಜಲವೆಂದಿಪ್ಪರು ಲೋಕದವರು.
ಪರಮಗುರು ಸಂಗನಬಸವಣ್ಣ ಜಗವಪಾಲಿಸ ಬರಲು
ಎನ್ನ ಪರಿಭವದ ದಂದುಗ ಹರಿಯಿತ್ತಯ್ಯಾ.
ಸುದ್ದಿಯನರಿಯಲರಿಯದೆ ಬೇಕಾದ ಪರಿಯಲ್ಲಿ

ಅನೇಕ ಜಡರೆಲ್ಲ ನುಡಿಯುತ್ತಿಹರು.
ಸತ್ತವರ ಪ್ರಾಣವನೆತ್ತಿ ಒಪ್ಪಿಪ್ಪ ನಿರ್ಣಯ
ಮರ್ತ್ಯದವರಿಗುಂಟೇ ಶಿವಂಗಲ್ಲದೆ ?
ಶಿವ ಗುರುಬಸವಣ್ಣ ಬಸವಗುರು ಶಿವನಾಗಿ
ದೆಸೆಗೆಟ್ಟ ದೇವತಾಪಶುಗಳಿಗೆ ಪತಿಯಾದನು.
ಬಸವಣ್ಣನ ನೆನವು ಸುಖಸಮುದ್ರವಯಾ!
ಕಪಿಲಸಿದ್ಧಮಲ್ಲಿನಾಥಾ,
ಬಸವಣ್ಣನ ತೋರಿದರಾಗಿ ನಾನು ಬದುಕಿದೆನು.

(ಗ. ೧೪, ವ. ೪)

೧೧೬

ಕರ್ಮವಿಲ್ಲದ ಕಾಯ, ಕರಣವಿಲ್ಲದ ಪ್ರಾಣ,
ಮಥನವಿಲ್ಲದ ಶಬ್ದ, ಗಮನವಿಲ್ಲದ ಮನ,
ಗುಹೇಶ್ವರಾ, ನಿಮ್ಮ ಬರವು
ಸಂಗನಬಸವಣ್ಣನ ಮೆಚ್ಚು ನೋಡಾ.

(ಗ. ೧೪, ವ. ೫)

೧೧೭

ಉಪಪಾತಕ ಮಹಾಪಾತಕಂಗಳ ಮಾಡಿದ
ಕರ್ಮಂಗಳು ಕೋಟ್ಯಾನುಕೋಟಿ
ಒಬ್ಬ ಶಿವಶರಣನ ಅಂಗಳವ ಕಂಡಲ್ಲಿ
ಅಳಿದು ಹೋಹವು ನೋಡಾ !
ಅದೇನು ಕಾರಣವೆಂದಡೆ–
[ಆ] ಶಿವಶರಣನ ಅಂತರಂಗದಲ್ಲಿ ಶಿವನಿಪ್ಪನು,
ಆ ಶಿವನಿದ್ದಲ್ಲಿ ಕೈಲಾಸವಿಪ್ಪುದು,
ಆ ಕೈಲಾಸವಿದ್ದಲ್ಲಿ ಸಮಸ್ತ ರುದ್ರಗಣಂಗಳಿಪ್ಪರು,
ರುದ್ರಗಣಂಗಳಿದ್ದಲ್ಲಿ ಅಷ್ಟಾಷಷ್ಟಿ ತೀರ್ಥಂಗಳಿಪ್ಪುವು.
ಶಿವನೊಲಿದಲ್ಲಿ ಇನಿತುವೆರಸಿ ನೆಲೆಸಿಪ್ಪನಯ್ಯಾ.
ಇಂತಪ್ಪ ಶರಣ ಬಸವಣ್ಣನ ಅಂಗಳವ ಕಂಡೆನಾಗಿ.
ಎಮ್ಮ ಗುಹೇಶ್ವರ ಲಿಂಗದ ಕಂಗಳಿಗೆ
ತೃಪ್ತಿಯಾಯಿತ್ತು ಕಾಣಾ ಸಿದ್ಧರಾಮಯ್ಯಾ.

(ಗ. ೧೪, ವ. ೬)

೧೧೮

ಜಂಗಮದಿಂಗಿತಾಕಾರವನರಿದ ಸದ್ಭಕ್ತರು
ಮನಮನ ಬೆರಸಿದರೆ,
ಕೂರ್ಮನ ಶಿಶುವಿನ ಸ್ನೇಹದಂತಿರಬೇಕು.
ಕಾಣದ ಮುನ್ನವೆ ತೆರಹಿಲ್ಲದಿರಬೇಕು ನೋಡಾ,
ಬಂದ ಭರವನರಿಯದೆ ನಿಂದ ನಿಲವ ನೋಡದೆ.
ಕೆಮ್ಮನೆ ಅಹಂಕಾರ ಹೊತ್ತಿಪ್ಪವರ
ನಮ್ಮ ಗುಹೇಶ್ವರಲಿಂಗನೊಲ್ಲ ನೋಡಾ !

(ಗ. ೧೪, ವ. ೭)

೧೧೯

ಎನ್ನ ಗುಣಾವಗುಣವ ಸಂಪಾದಿಸದಿರಯ್ಯಾ.
ಪ್ರತಿಯಿಲ್ಲದಪ್ರತಿಮ ನೀನು; ನಿನಗಾನು ಸರಿದೊರೆಯೆ ?
ಅನುಪಮ ಮಹಿಮ ಕೂಡಲಸಂಗಮದೇವಾ
ನೀ ಮಾಡಲಾನಾದೆನಯ್ಯಾ!

(ಗ. ೧೪, ವ. ೮)

೧೨೦

ಕೈಯಲ್ಲಿ ಡೊಣ್ಣೆ, ಮನದಲ್ಲಿ ಕ್ರೋಧ, ವಚನದಲ್ಲಿ ಕಿಂಕಿಲ.
ಲಿಂಗದ ವಾರ್ತೆಯು ನಿನಗೇಕೆ ಬಸವಾ ?
ಜಂಗಮ ಲಿಂಗವೆಂಬ ಶಬ್ದ ಸಂದೇಹಸೂತಕಿ ನೀನು !
ಸಜ್ಜನ ಸತಿಯ ಮಾತು ನಿನಗೇಕೆ ಹೇಳಾ ?
ಕಬ್ಬುನದ ರೂಪು ಪರುಷವ ಮುಟ್ಟಿದಡೆ ಹೊನ್ನಾಯಿತ್ತಲ್ಲದೆ
ಪರುಷವಪ್ಪುದೆ ನೋಡಾ ?
ಗುಹೇಶ್ವರನೆಂಬ ಪರುಷದ ಪುತ್ಥಳಿಯನರಿಯಬಲ್ಲಡೆ
ತಿಳಿದು ನೋಡಾ ಸಂಗನಬಸವಣ್ಣಾ.

(ಗ. ೧೪, ವ. ೯)

೧೨೧

ಧ್ಯಾನ ಮೌನವೆಂಬ ಶಬ್ದವ ಹಿಡಿದು ನಿಮ್ಮಗಲಲರಿಯದೆ
ಅಹಂಕಾರದ ಧಾರೆಯೆಂಬ
ಮೊನೆಯ ಶಸ್ತ್ರವ ಹಿಡಿದು ಕೆಟ್ಟೆನಯ್ಯಾ!
ಅಂಜುವೆನಂಜುವೆನಯ್ಯಾ!
ಜಂಗಮಲಿಂಗವೆಂಬ ಭಾಷೆ ಪಲ್ಲಟವಾಯಿತ್ತು.
ಹೊಯ್ದು ಬಯ್ದು ರಕ್ಷಿಸು ಕೂಡಲಸಂಗಮದೇವಾ.

(ಗ. ೧೪, ವ. ೧೦)

೧೨೨

ಗುರುಸ್ಥಲ ಲಿಂಗಸ್ಥಲ ಜಂಗಮಸ್ಥಲ ಪ್ರಸಾದಿಸ್ಥಲ
೧ತೊಡಕಿದ ಕರಸ್ಥಲದೊಳಗು೨
ಇನ್ನಾರಿಗೆ ಸಾರಿತು ಭಕ್ತಿಸ್ಥಲವು ?
ಗುಹೇಶ್ವರಾ, ಸಂಗನಬವಣ್ಣನ ಭಕ್ತಿಯಿಂದ
ನಾನು ಬದುಕಿದೆನು.

(ಗ. ೧೪, ವ. ೧೧)

೧೨೩

ಬೀದಿಯಲಿ ಬಿದ್ದ ಮಾಣಿಕ್ಯ
ಹೂಳಿದ್ದ ನಿಧಾನವಿದಾರಿಗೂ ಕಾಣಬಾರದು ನೋಡಾ.
ಮರಣವುಳ್ಳವರಿಗೆ ಮರಜವಣಿ ಸಿಕ್ಕುವುದೆ ?
ಪಾಪಿಯ ಕಣ್ಣಿಗೆ ಪರುಷ ಕಲ್ಲಾಗಿಪ್ಪಂತೆ
ಅಡಗಿಪ್ಪರಯ್ಯ ಶಿವಶರಣರು!
ಗುಹೇಶ್ವರನ ಶರಣ
ಮರುಳಶಂಕರದೇವರ ನಿಲವ ನೋಡಾ ಸಂಗನಬಸವಣ್ಣಾ!

(ಗ. ೧೫, ವ. ೧)

೧೨೪

ಕಾಮನ ಕಣ್ಣ ಮುಳ್ಳ ಕಳೆದು
ಭೂಮಿಯ ತೈಲದ ಸೀಮೆಯ ಕೆಡಿಸಿ
ಹೋಮವನುರುಹಿ ದಕ್ಷನ ತಲೆಯನರಿದು
ನಿಸ್ಸೀಮನಾದ ಮಹಿಮನ ನಿಲವನರಿಯಬಹುದೆ ?
ಅರಿವಿಂಗಸಾಧ್ಯ, ಉಪಮೆಗೆ ಕಡೆಮುಟ್ಟದು!
ಗುಹೇಶ್ವರನ ಕರುಣಪ್ರಸಾದಿ ಮರುಳಶಂಕರದೇವ
ಎಂತಪ್ಪನೆಂಬುದ [ತಿಳಿದು] ನೋಡಾ, ಸಂಗನಬಸವಣ್ಣಾ.

(ಗ. ೧೫, ವ. ೨)

೧೨೫

ಆದಿಯಲ್ಲಿ ಹುಟ್ಟಿತ್ತಲ್ಲ. ಅನಾದಿಯಲ್ಲಿ ಬೆಳೆಯಿತ್ತಲ್ಲ.
ಮೂರ್ತಿಯಲ್ಲಿ ನಿಂದುದಲ್ಲ.
ಆ ಮೂರ್ತಿಯಲ್ಲಿ ಭಾವಿಯಲ್ಲ.

---

೧-೨ ವಡಗಿದ ಕರಸ್ಥಲವಿನ್ನಾರಿಗೆ ಸಾರಿತ್ತು ? (ಅ.ಪ್ರ.ವ. ೯೩೭)

ಅರಿವಿನೊಳಗೆ ಅರಿದುದಲ್ಲ.
ಮರಹಿನೊಳಗೆ ಮರೆದುದಲ್ಲ.
ಎಂತಿರ್ದಡಂತೆ ಬ್ರಹ್ಮ ನೋಡಾ!
ತನು ಮನ ಲೀಯವಾಗಿ ಘನದಲ್ಲಿ ಒಂದಾದಡೆ
ಮನಕ್ಕೆ ವಿಸ್ಮಯವೇನು ಹೇಳಾ ?
ಕೂಡಲಚೆನ್ನಸಂಗನ ಶರಣ ಮರುಳುಶಂಕರದೇವರು
ಪ್ರಭುದೇವರ ಪ್ರಭೆಯಲ್ಲಿ ಕಂತೆಯ ಕಳೆಯದೆ
ನಿರ್ವಯಲಾದರೆ, ನಿಜವೆಂತಿರ್ದಂತೆ ಪರಿಣಾಮಿಸಬೇಕಯ್ಯಾ.

(ಗ. ೧೫, ವ. ೩)

೧೨೬

ಮೂಗಕಂಡ ಕನಸಿನಂತಾಯಿತ್ತೆನ್ನ ಶಿವಾಚಾರ
ಹೇಳಬಾರದು ಕೇಳಬಾರದಾರಿಗೆಯೂ!
ಎನ್ನ ಹೆಗ್ಗತನವ ಮಾಣಿಸಯ್ಯಾ,
ಕೂಡಲಸಂಗಮದೇವ ಪ್ರಭುವೆ.

(ಗ. ೧೬, ವ. ೧)

೧೨೭

ಎಲ್ಲಾಯೆಲ್ಲವನರಿಯಬಹುದು, ಸಾವನರಿಯಬಾರದು.
ಸಕಲವಿದ್ಯಾಕಳಾಪ್ರೌಢಿಯನರಿಯಬಹುದು,
ಸಾವನರಿಯಬಾರದು.
ಶಿವಶಿವಾ ಮಹಾಮಹಿಮರಿಗೆಯೂ ಸಾವು.
ದೇವದಾನವಮಾನವರಿಗೆ ಕಾಲ ಕಾಮ ದಕ್ಷಾದಿಗಳಿಗೆಯೂ ಸಾವು.
ಈ ಸಾವನರಿದು ಲೋಕಪ್ರಪಂಚ ಮರೆದು
ಲಿಂಗದಲ್ಲಿಯೆ ನೆನಹು ನೆಲೆಗೊಂಡಡೆ ಆತ ಮಹಿಮ;
ಆ ಮಹಿಮಂಗೆ ಮರಣವಿಲ್ಲ.
ಸಾವನರಿಯದೆ, ಲೋಕಪ್ರಪಂಚ ಮರೆಯದೆ,
ಅರೆಮರುಳುಗಳು ಅರಿದೆವೆಂಬುದು
ಮಾನಹಾನಿ ಕಾಣಾ ಗುಹೇಶ್ವರಾ.

(ಗ. ೧೬, ವ. ೨)

೧೨೮

ನಾನು ಭಕ್ತನಲ್ಲವಯ್ಯಾ. ನಾನು ಯುಕ್ತನಲ್ಲವಯ್ಯಾ,
ನಾನು ಮುಕ್ತನಲ್ಲವಯ್ಯಾ, ನಾನು ಕಪಟವೇಷಡಂಬಕ.
ಕೂಡಲಸಂಗಮದೇವಾ, ಎನ್ನ ಭಕ್ತಿ ಲೊಳಲೊಟ್ಟಿಲು ಎಂಬುದು
ನೀವು ತೋರಿದಿರಾಗಿ, ಎನಗೆ ಅರಿಯಬಂದಿತ್ತಯ್ಯಾ ಪ್ರಭುವೆ.

(ಗ. ೧೬, ವ. ೩)

೧೨೯

ಸಜ್ಜನ ಸನ್ನಿಹಿತವಾದ ಭಕ್ತಿ
ಹೊತ್ತಿಗೊಂದು ಪರಿಯುಂಟೆ ?
ಒಮ್ಮೆ ಅಹಂಕಾರ ಒಮ್ಮೆ ಕಿಂಕಲವೆ ?
ಮನಕ್ಕೆ ಮನ ಸಾಕ್ಷಿಯಾಗಿ ಮಾಡುವ ಭಕ್ತರಲ್ಲಿ
ಗುಹೇಶ್ವರನಿಪ್ಪನಲ್ಲದೆ,
ಪ್ರಪಂಚಿನೊಳಗಿಲ್ಲ ಕಾಣಾ, ಸಂಗನಬಸವಣ್ಣಾ.

(ಗ. ೧೬, ವ. ೪)

೧೩೦

*ಧ್ಯಾನ ಮೌನವೆಂಬ ಶಬ್ದವ ಹಿಡಿದು ನಿಮ್ಮ ಗೆಲಲರಿಯದೆ
ಅಹಂಕಾರದ ಧಾರೆಯೆಂಬ ಮೊನೆಯ
ಅಲಗಿನ ಶಸ್ತ್ರವ ಹಿಡಿದು ಕೆಟ್ಟೆನಯ್ಯಾ.
ಅಂಜುವೆನಂಜುವೆನಯ್ಯಾ;
ಜಂಗಮ ಲಿಂಗವೆಂಬ ಭಾಷೆ ಪಲ್ಲಟವಾಯಿತ್ತು.
ಜಂಗಮ ಲಿಂಗವೆಂಬ ಶಿಕ್ಷಾಶಸ್ತ್ರದಲ್ಲಿ
ಎನ್ನ ಹೊಯ್‌ಹೊಯ್ದು
ರಕ್ಷಿಸುವುದು ಕೂಡಲಸಂಗಮದೇವಯ್ಯಾ.

(ಗ. ೧೬, ವ. ೫)

೧೩೧

ಕದಳಿಯ ಬನವ ಹೊಕ್ಕು ಹೊಲಬು ತಿಳಿಯದನ್ನಕ್ಕ
ಬಯಲ ಗಾಳಿಯ ಹಿಡಿದು ಗಟ್ಟಿಯಮಾಡದನ್ನಕ್ಕ
ಬರಿದೆ ಬಹುದೆ ಶಿವಜ್ಞಾನ ?

---

* ಈ ವಚನ ಗತಿ ೧೪ರಲ್ಲೂ ಬಂದಿದೆ. ನೋಡಿ ವಚನ ೧೨೧

ಅರಿಷಡ್ವರ್ಗವ ಅಳಿಯದನ್ನಕ್ಕ ಬರಿದೆ ಬಹುದೆ ?
ಅಷ್ಟಮದವಳಿಯದನ್ನಕ್ಕ ಬರಿದೆ ಬಹುದೆ ?
ಮದ ಮತ್ಸರವ ಮಾಡಲಿಲ್ಲ, ಹೊದಕುಳಿಗೊಳಲಿಲ್ಲ
ಗುಹೇಶ್ವರಲಿಂಗ ಕಲ್ಪಿತದೊಳಗಲ್ಲ!

(ಗ. ೧೭. ವ. ೧)

೧೩೨

ಲಿಂಗಸುಖದಲ್ಲಿ ಮನವೇದ್ಯವಾಯಿತ್ತುವಾಯಿತ್ತು.
ಇನ್ನೆಂತಯ್ಯಾ ಎನಗೆ ನಿಮ್ಮಲ್ಲಿ ನಿರವಯವು ?
ಇನ್ನೆಲ್ಲಿಯಯ್ಯಾ ನಿಮ್ಮಲ್ಲಿ ಕೂಡುವದು ?
ಪರಮಸುಖಪರಿಣಾಮ ಮನ ಮೀರೆದಪ್ಪಿ
ನಾನು ನಿಜವನೆಯ್ದುವ ಠಾವ ಹೇಳಾ
ಚೆನ್ನಮಲ್ಲಿಕಾರ್ಜುನ ಪ್ರಭುವೆ.

(ಗ. ೧೭. ವ. ೨)

೧೩೩

ನೀನು ನಾನೆಂಬ ಉಭಯ ಸಂಗವಳಿದು ತಾನು ತಾನಾದ,
ತ್ರಿಕೂಟವೆಂಬ ಮಹಾಗಿರಿಯ
ತುಟ್ಟ ತುದಿಯ [ಮೆಟ್ಟಿ] ನೋಡಲು,
ಬಟ್ಟಬಯಲು ಕಾಣಬಹುದು.
ಆ ಬಟ್ಟಬಯಲ ಬೆರಸುವಡೆ,
ಶ್ರೀಗಿರಿಯೊಳಗೊಂದು ಕಾಣಬಾರದ ಕದಳಿಯುಂಟು ನೋಡಾ!
ಆ ಕದಳಿಯ ತಿಳಿದು. ಅಲ್ಲಿ ಒಳಹೊಕ್ಕು ನೋಡಲು
ತೊಳಗಿ ಬೆಳಗುವ ಜ್ಯೋತಿಯುಂಟು ಕೇಳಾ.
ನಡೆಯಲ್ಲಿಗೆ ತಾಯೆ;
ಗುಹೇಶ್ವರ ಲಿಂಗದಲ್ಲಿ ಪರಮ ಪದವು ಸ್ವಯವಪ್ಪುದು ನೋಡಾ.

(ಗ. ೧೭, ವ. ೩)

೧೩೪

ಅಂಗವಿಕಾರ ಸಂಗವ ಮರೆದು.
ಲಿಂಗವನೊಡಗೂಡುತಿಪ್ಪವರ ತೋರಾ ಎನಗೆ.
ಕಾಮವಿಕಾರ ಕತ್ತಲೆಯಳಿದು

ಭಕ್ತಿಯೇ ಪ್ರಾಣವಾಗಿಪ್ಪವರ ತೋರಾ ಎನಗೆ,
ತ್ರಿಕರಣಶುದ್ಧವಾಗಿ ನಿಮ್ಮ ನೆರೆನಂಬಿದ
ಸದ್ಭಕ್ತರ ತೋರಾ ಎನಗೆ ಚೆನ್ನಮಲ್ಲಿಕಾರ್ಜುನಾ.

(ಗ. ೧೭, ವ. ೪)

೧೫೫

ಕಲ್ಯಾಣವೆಂಬುದಿನ್ನಾರಿಗೂ ಹೋಗಬಾರದು, ಅಸಾಧ್ಯವಯ್ಯಾ.
ಆಸೆ ಆಮಿಷವನಳಿದವಂಗಲ್ಲದೆ ಕಲ್ಯಾಣದತ್ತಲಡಿಯಿಡಬಾರದು.
ಒಳಗು ಹೊರಗು ಶುದ್ಧವಾದಂಗಲ್ಲದೆ ಕಲ್ಯಾಣವ ಹೋಗಬಾರದು.
ನೀನೆಂಬುದನರಿದು ನಾನೆಂಬುದ ಮರೆದು ತಾನು ತಾನಾದಂಗಲ್ಲದೆ
ಕಲ್ಯಾಣವ ಹೊಕ್ಕು ಬೆರಸಬಾರದು.
ಲಜ್ಜೆಗೆಟ್ಟೆನಲ್ಲಾ ಸತಿ ಬೇಟಕ್ಕೊಳಿದು; ನಾನಾವುದನು ಅರಿಯೆನಾಗಿ
ಚೆನ್ನಮಲ್ಲಿಕಾರ್ಜುನನ ಧರ್ಮದಿಂದ ನಾನು ಕಲ್ಯಾಣವ ಕಂಡೆನು.

(ಗ. ೧೭, ವ. ೫)

೧೫೬

ಗಿರಿಯೊಳು, ವನದೊಳು, ಗಿಡಗಿಡದತ್ತ,
ದೇವ ದೇವಾ, ಎನ್ನ ದೇವ ಬಾರಯ್ಯಾ,
ತೋರಯ್ಯಾ ನಿಮ್ಮ ಕರುಣವನೆಂದು
ನಾನು ಅರಸುತ್ತ ಅಳಲುತ್ತ ಕಾಣದೆ ಸುಯಿದು ಬಂದು
ಕಂಡೆ ಶರಣರ ಸಂಗದಿಂದ.
ಅರಸಿ ಹಿಡಿದೇನೆಂದು ಬಂದಡೆ
ನೀನಡಗುವ ಠಾವ ಹೇಳಾ ಚೆನ್ನಮಲ್ಲಿಕಾರ್ಜುನಾ.

(ಗ. ೧೭, ವ. ೬)

೧೫೭

ಅರಸಿ ತೊಳಲಿದರಿಲ್ಲ, ಹರಸಿ ಬಳಲಿದರಿಲ್ಲ.
ಬಯಸಿ ಹೊಕ್ಕರಿಲ್ಲ, ತಪಸ್ಸು ಮಾಡಿದರಿಲ್ಲ.
ಅದು ತನ್ನ ತಾನಹ ಕಾಲಕಲ್ಲದೆ ಸಾಧ್ಯವಾಗದು.
ಶಿವನೊಲಿದಲ್ಲದೆ ಆಗದು.
ಚೆನ್ನಮಲ್ಲಿಕಾರ್ಜುನನೆನಗೊಲಿದನಾಗಿ
ನಾನು ಸಂಗನಬಸವಣ್ಣನ ಶ್ರೀಪಾದವ ಕಂಡು ಬದುಕಿದೆನಯ್ಯಾ.

(ಗ. ೧೭, ವ. ೭)

೧೩೮

ಅಯ್ಯಾ ನಿಮ್ಮ ಸದ್ಭಕ್ತರ ಕಂಡೆನಾಗಿ
ಎನ್ನ ಕಂಗಳ ಪಟಲ ಹರಿಯಿತ್ತು.
ಅಯ್ಯಾ ನಿಮ್ಮ ಸಜ್ಜನ ಸದ್ಭಕ್ತರ ಶ್ರೀಚರಣಕ್ಕೆರಗಿದೆನಾಗಿ
ಎನ್ನ ಹಣೆಯ ಲಿಖಿತ ತೊಡೆಯಿತ್ತು.
ಚೆನ್ನಮಲ್ಲಿಕಾರ್ಜುನದೇವಾ,
ನಿಮ್ಮ ಶರಣ ಸಂಗನಬಸವಣ್ಣನ ಕಂಡು
ಮಿಗೆ ಮಿಗೆ ನಮೋ ನಮೋ ಎನುತಿರ್ದೆನಯ್ಯಾ

(ಗ. ೧೭, ವ. ೮)

೧೩೯

ಕಾಯದ ಕಲ್ಪಿತವಳಿದು, ಜೀವದ ಲಜ್ಜೆಯ ಮೋಹವನಳಿದು,
ಮನದ ಲಜ್ಜೆಯ ನೆನಹು ಸುಟ್ಟು,
ಭಾವದ ಕೂಟ ಬತ್ತಲೆಯೆಂದರಿದು,
ತವಕದ ಸ್ನೇಹ ವ್ಯವಹಾರಕ್ಕೆ ಹೋಗದು.
ಕೂಡಲಸಂಗಮದೇವರಲ್ಲಿ,
ಎನ್ನ ಹೆತ್ತತಾಯಿ ಮಹಾದೇವಿಯಕ್ಕನ
ನಿಲವ ನೋಡಾ ಪ್ರಭುವೆ!

(ಗ. ೧೭, ವ. ೯)

೧೪೦

ರೂಪಿಲ್ಲದವರಿಗೆ ಒಲಿದವರಿಗೆ ತನುವಿನ ಹಂಗುಂಟೆ ?
ಮನವಿಲ್ಲದವಂಗೆ ಮೆಚ್ಚಿದವರಿಗೆ ಅಭಿಮಾನದ ಹಂಗುಂಟೆ ?
ಕೂಡಲಸಂಗಮದೇವಯ್ಯಾ,
ಮಹಾದೇವಿಯಕ್ಕನೆಂಬ ಭಕ್ತೆಯ ರೂಪಿಂಗೆ
ಆವ ಹೊಲ್ಲೆಯವಿಲ್ಲ, ನೋಡಾ ಪ್ರಭುವೇ!

(ಗ. ೧೭, ವ. ೧೦)

೧೪೧

ಉನ್ಮದ ಯೌವನವನೊಳಕೊಂಡ ಸತಿ ನೀನು
ಇತ್ತಲೇಕೆ ಬಂದೆ ಹೇಳವ್ವಾ ?
ಸತಿ ಎಂದರೆ ಮುನಿವರು ನಮ್ಮ ಶರಣರು.

ನಿನ್ನ ಪತಿಯ ಕುರುಹು ಹೇಳಿದಡೆ ಬಂದು ಕುಳ್ಳಿರು,
ಅಲ್ಲದಿರ್ದಡೆ ತೊಲಗು ತಾಯೆ !
ಗುಹೇಶ್ವರ ಶರಣರ ಲಿಂಗದ ಸಂಗಸುಖವ ಬಯಸುವರೆ
ನಿನ್ನ ಪತಿಯ ಕರುಹು ಹೇಳಾ, ಎಲೆ ಅವ್ವಾ.

(ಗ-೧೭, ವ. ೧೧)

೧೪೨

ಗುರುವೆ ತೆತ್ತಿಗನಾದ, ಲಿಂಗವೇ ಮದುವಣಿಗನಾದ.
ನಾನು ಮದುವಣಗಿತ್ತಿಯಾದೆನು.
ಈ ಭುವನವೆಲ್ಲವರಿಯಲು
ಅಸಂಖ್ಯಾತರು ಎನಗೆ ತಾಯಿ ತಂದೆಗಳಾದರು.
ಕೊಟ್ಟರು ಎನಗೆ ಸಾದೃಶ್ಯಮಪ್ಪ ವರನ ನೋಡಿ.
ಇದು ಕಾರಣ ಚೆನ್ನಮಲ್ಲಿಕಾರ್ಜುನ ಗಂಡನಾದ ಬಳಿಕ,
ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯಾ.

(ಗ. ೧೭, ವ. ೧೨)

೧೪೩

ಸಾವಿಲ್ಲದ ಸಹಜಂಗೆ, ರೂಹಿಲ್ಲದ ಚೆಲುವಂಗೆ,
ಭವವಿಲ್ಲದ ಅಭವಂಗೆ, ನಿಶ್ಚಯದ ನಿಶ್ಚಲಗೆ,
ನಾನೊಲಿದೆನಯ್ಯಾ!
ಚೆನ್ನಮಲ್ಲಿಕಾರ್ಜುನಂಗೊಲಿದ ಕಾರಣ
ಮಿಕ್ಕಿನವರಾರೂ ಸಂಬಂಧವಿಲ್ಲವಯ್ಯಾ.

(ಗ. ೧೭, ವ. ೧೩)

೧೪೪

ರೂಪಿಂಗೆ ಕೇಡುಂಟು, ನಿರೂಪಿಂಗೆ ಕೇಡಿಲ್ಲ,
ರೂಪು ನಿರೂಪಿನೊಳೊಡಗೂಡುವ ಪರಿಯೆಂತು ಹೇಳಾ ?
ಸಂಬಂಧ ಅಸಂಬಂಧವಾಗಿದೆ.
ಪಂಚೇಂದ್ರಿಯವೆಂಬ ಜಾತಿಸೂತಕವಿರಲು
ಗುಹೇಶ್ವರಲಿಂಗವ ಮುಟ್ಟಬಾರದು ಕೇಳವ್ವಾ!

(ಗ. ೧೭, ವ. ೧೪)

೧೪೫

ಎನ್ನತನು ಶುದ್ಧವಾಯಿತ್ತು ಶಿವಭಕ್ತರೊಕ್ಕುದನುಂಡು.
ಎನ್ನ ಮನ ಶುದ್ಧವಾಯಿತ್ತು ಅಸಂಖ್ಯಾತರ ನೆನೆನೆನೆದು.
ಎನ್ನ ಕಂಗಳು ಶುದ್ಧವಾಯಿತ್ತು ಇಂದು
ಸಕಲ ಶಿವಗಣಂಗಳ ಮುಖವ ನೋಡಿ.
ಎನ್ನ ಶ್ರೋತ್ರ ಶುದ್ಧವಾಯಿತ್ತು ಅವರ ಕೀರ್ತನೆಯ ಕೇಳಿ.
ಎನ್ನ ಭಾವನೆ ಎನಗಿದು ಜೀವನವು ಕೇಳಾ ಲಿಂಗತಂದೆ.
ನೆಟ್ಟನೆ ನಿಮ್ಮ ಪೂಜಿಸಿ ಭವಗೆಟ್ಟೆನು ಕಾಣಾ
ಚೆನ್ನಮಲ್ಲಿಕಾರ್ಜುನಾ.

(೧. ೧೭, ವ. ೧೫)

೧೪೬

ಸಂಬಂಧ ಸಂಬಂಧವೆಂದು ಹೆಸರಿಟ್ಟು ನುಡಿವಿರಿ,
ಸಂಬಂಧವಾವುದು ನೀವು ಬಲ್ಲರೆ ಹೇಳಿರೆ ?
ಕಾಯಜೀವಪ್ರಾಣತ್ರಿವಿಧ ಸಂಬಂಧವನರಿದಡೆ,
ಗುಹೇಶ್ವರಲಿಂಗದಲ್ಲಿ ಆತನೆ ಸಂಬಂಧಿ.

(ಗ. ೧೮, ವ. ೧)

೧೪೭

ಒಳಗೆ ತೊಳೆಯಲರಿಯದೆ
ಹೊರಗನೆ ತೊಳೆದು ಕುಡಿವುತಿರ್ದರಲಾ!
ಪಾದೋದಕ ಪ್ರಸಾದವನರಿಯದೆ,
ಬಂದಭವದಲ್ಲಿ ಮುಳುಗುತ್ತೈದಾರೆ ಗುಹೇಶ್ವರಾ!

(ಗ. ೧೮, ವ, ೨)

೧೪೮

ಆಧಾರದಲ್ಲಿ ಬ್ರಹ್ಮನೆಂಬ ಸ್ವಾಯತ
ಸ್ವಾಧಿಷ್ಠಾನದಲ್ಲಿ ವಿಷ್ಣುವೆಂಬ ಸ್ವಾಯತ,
ಮಣಿಪೂರಕದಲ್ಲಿ ರುದ್ರನೆಂಬ ಸ್ವಾಯತ,
ಅನಾಹತದಲ್ಲಿ ಈಶ್ವರನೆಂಬ ಸ್ವಾಯತ

ವಿಶುದ್ಧಿಯಲ್ಲಿ ಸದಾಶಿವನೆಂಬ ಸ್ವಾಯತ,
ಆಜ್ಞಾ ಚಕ್ರದಲ್ಲಿ ಶಾಂತ್ಯತೀತ [ನೆಂಬಸ್ವಾಯತ]
ಗುಹೇಶ್ವರಲಿಂಗದಲ್ಲಿ ವ್ಯೋಮ ವ್ಯೋಮವ ಕೂಡಿದಂತೆ!

(ಗ. ೧೮. ವ. ೩)

೧೪೯

ಊರಕ್ಕಿ ಊರೆಣ್ಣೆ ಮಾರಿಕವ್ವ ತಾಯೆ ಬಾರೆ,
ಕುಮಾರನ ತಲೆಗಾಯಿ–ಎಂಬಂತೆ!
ಕಾಡಹೂವಿನಲ್ಲಿ ಕಲ್ಲಲಿಂಗವ ಪೂಜೆಯ ಮಾಡುವ
ಭವಿಯ ಭಕ್ತನೆಂಬರು!
ತನು ಲಿಂಗ ಮನ ಪುಷ್ಪ
ಪೂಜೆಯ ಮಾಡು[ವ]ವನೆ ಸದ್ಭಕ್ತ ಗುಹೇಶ್ವರಾ.

(ಗ. ೧೮, ವ. ೪)

೧೫೦

ಈಶ್ವರ ನುಡಿದ ನುಡಿಯನರಿದೆನೆಂದು ಬೀಸರವೋದರಣ್ಣಗಳೆಲ್ಲ.
ಪ್ರಾಣಲಿಂಗವೆಂತೆಂಬರಯ್ಯಾ ?
ಮನ ಘನವೆಂದರಿಯದೆ ಮರುಳುಗೊಂಡರು.
ಈಶ್ವರನನರಿದಡೆ ತಾ ಶಿವನು:
ಗುಹೇಶ್ವರನೆಂಬುದು ಬೇರಿಲ್ಲಾ.

(ಗ. ೧೮, ವ, ೫)

೧೫೧

ಅಸ್ತಿಗೆ ಚರ್ಮವಾಧಾರವಾಗಿ
ಪ್ರಾಣಕ್ಕೆ ಪ್ರಸಾದ ಮೃತ್ತಿಕೆಯಾಗಿ
ಇದು ಪ್ರಾಣಲಿಂಗ ಸಂಬಂಧವಲ್ಲಲ್ಲ ನಿಲ್ಲಿಭೋ
ಪ್ರಾಣಲಿಂಗದ ಸಂಬಂಧವೆಂಬುದು ಕರಕಷ್ಟ ನೋಡಾ!
ಪ್ರಾಣಲಿಂಗವೆಂಬುದು ಕರನಾಚಿಕೆ ನೋಡಾ
ಒಡೆದ ಮಡಕೆಗೆ ಒತ್ತಿ ಮಣ್ಣ ಮೆತ್ತಿದರೆ
ಅದು ತರಹರವಾಗಬಲ್ಲುದೆ ಗುಹೇಶ್ವರ ?

(ಗ. ೧೮, ವ. ೬)

೧೫೭

ಪ್ರಾಣಲಿಂಗವೆಂಬ ಶಬುದಕ್ಕೆ ನಾಚಿತ್ತು ನಾಚಿತ್ತು ಮನ.
ಪ್ರಾಣ ಹೋದರೆ, ಕಾಯ ಬಿದ್ದಡೆ, ಲಿಂಗವೊಂದೆಸೆಯಾದಡೆ
ನಾಚಿತ್ತು ನಾಚಿತ್ತು ಮನ.
ಪ್ರಾಣಲಿಂಗಸಂಬಂಧಿ ಗುಹೇಶ್ವರಾ ನಿಮ್ಮ ಶರಣ.

(ಗ. ೧೮, ವ. ೭)

೧೫೩

ಸುತ್ತಿ ಸುತ್ತಿ ಬಂದೊಡಿಲ್ಲ, ಲಕ್ಷಗಂಗೆಯ ಮಿಂದೊಡಿಲ್ಲ.
ತುಟ್ಟತುದಿಯ ಮೇರುಗಿರಿಯ ಮೆಟ್ಟಿ ಕೂಗಿದೊಡಿಲ್ಲವಯ್ಯಾ.
ನಿತ್ಯನೇಮದಿಂದ ತನುವ ಮುಟ್ಟಿಕೊಂಡಡಿಲ್ಲ.
ನಿಚ್ಚ ನಿಚ್ಚ ಲಿಂಗಾಧೀನ ಗಮನವಂದಿಗಂದಿಗಯ್ಯಾ.
ಸುತ್ತಿಸುಳಿದು ಹರಿವ ಮನವ ಚಿತ್ತದಲಿ ಸಂತೈಸಬಲ್ಲರೆ
ಬಚ್ಚಬರಿಯ ಬಯಲು ಗುಹೇಶ್ವರನೆಂಬ ಲಿಂಗವು.

(ಗ. ೧೮, ವ. ೮)

೧೫೪

ಒಕ್ಕು ಮಿಕ್ಕುದನುಂಬ ನಿಚ್ಚ ಪ್ರಸಾದಿಗಳು
ನೀವು ಕೇಳಿಭೋ.
ಒಕ್ಕು ಹೋಹುದಾವುದು ? ಮಿಕ್ಕು ಹೋಹುದಾವುದು ?
ಬಲ್ಲರೆ ನೀವು ಹೇಳಿಭೋ.
ಒಕ್ಕು ಹೋಹುದೆ ಕಾಯ, ಮಿಕ್ಕು ಹೋಹುದೆ ಪ್ರಾಣ
ಸಿಕ್ಕಿದ ಕಾಣಾ ನಮ್ಮ ಗುಹೇಶ್ವರಾ.

(ಗ. ೧೮, ವ. ೯)

೧೫೫

ಇಷ್ಟಲಿಂಗವೆ ಪ್ರಾಣಲಿಂಗವೆಂದು ನುಡಿವ
ಮಿಟ್ಟೆಯ ಭಂಡರು ನೀವು ಕೇಳಿಭೋ.
ಇಷ್ಟಲಿಂಗವನು ಪ್ರಾಣಲಿಂಗವನು ಕಾಯಲಿಂಗವನು
ಮೆಟ್ಟಿ ಹೂಳುವಲ್ಲಿ ಬಿಟ್ಟು ಹೋಹ ಪ್ರಾಣಕ್ಕೆ
ಇನ್ನಾವುದು ಲಿಂಗ ಹೇಳಾ ಗುಹೇಶ್ವರಾ ?

(ಗ. ೧೮, ವ. ೧೦)

೧೫೬

ಕಾಮನ ಕೊಂದಾತನಲ್ಲದೆ ಶುದ್ಧಪ್ರಸಾದಿಯಲ್ಲ,
ಕಾಲನ ತಿಂದಾತನಲ್ಲದೆ ಸಿದ್ಧಪ್ರಸಾದಿಯಲ್ಲ.
ತ್ರಿಪುರವ ಸುಟ್ಟಾತನಲ್ಲದೆ ಪ್ರಸಿದ್ಧಪ್ರಸಾದಿಯಲ್ಲ,
ಕೆಸರಿಲಿ ಕಿಚ್ಚನಿಕ್ಕಿ ಬಸುರ ಬಡಿದುಕೊಂಡಾತಗಲ್ಲದೆ
ಪ್ರಸಾದವಿಲ್ಲ ಕಾಣಾ ಗುಹೇಶ್ವರಾ.

(ಗ. ೧೮, ವ. ೧೧)

೧೫೭

ಅಚ್ಚಪ್ರಸಾದಿಗಳು ನಿಚ್ಚಪ್ರಸಾದಿಗಳೆಂಬಿರೆ;
ನಿಚ್ಚಕ್ಕೆ ಹುಸಿವ ಹುಸಿಗಳ ನಾವು ಕಂಡೆವಲ್ಲಾ!
ವಾಯು ಬೀಸುವಲ್ಲಿ ಆಕಾಶ ಬಲಿವಲ್ಲಿ
ಲಿಂಗಾರ್ಪಿತ ಮುಖವನರಿಯರಲ್ಲಾ!
ಭೋಜನವನುಂಡು ಭಾಜನವನಿಕ್ಕಿಟ್ಟು ಹೋಹ
ಹಿರಿಯರಿಗೆ ಅಂದೇ ಭಂಗ ಗುಹೇಶ್ವರಾ.

(ಗ. ೧೮, ವ. ೧೨)

೧೫೮

ತನು ಹೊರಗಿರಲು ಪ್ರಸಾದ ಒಳಗಿರಲು ಏನಯ್ಯಾ ?
ನಿಮ್ಮ ಮನಕ್ಕೆ ಮನನಾಚದು.
ಪ್ರಾಣಲಿಂಗದಲಿ ಪ್ರಸಾದ ಕೊಂಡರೆ
ವ್ರತಕ್ಕೆ ಭಂಗ ಗುಹೇಶ್ವರಾ.

(ಗ. ೧೮, ವ. ೧೩)

೧೫೯

ತಲೆಯಲಟ್ಟುಣಲೊಲ್ಲದೆ ಒಲೆಯಲಟ್ಟುಂಬರು.
ಒಲೆಯಲಟ್ಟು ಒಡಲ ತುಂಬಿದರೆ
ಹೊಗೆ ಘನವಾಯಿತ್ತು!
ಇದ ಕಂಡಾದರೆಯೂ ಹೇಸಿ ಬಿಡಬೇಡವೇ, ಗುಹೇಶ್ವರಾ ?

(ಗ. ೧೮, ವ.೧೩)

೧೬೦

ಕಳ್ಳಗಂಜಿ ಕಾಡ ಹೊಕ್ಕರೆ ಹುಲಿ ತಿಂಬುದು; ಮಾಬುದೆ ?
ಹುಲಿಗಂಜಿ ಹುತ್ತ ಹೊಕ್ಕರೆ ಸರ್ಪ ತಿಂಬುದು; ಮಾಬುದೆ ?
ಸರ್ಪಗಂಜಿ ಸಮುದ್ರ ಹೊಕ್ಕರೆ ನೆಗಳೆ ತಿಂಬುದು ಮಾಬುದೆ ?
ಕಾಲಕ್ಕಂಜಿ ಭಕ್ತನಾದರೆ ಕರ್ಮ ತಿಂಬುದು; ಮಾಬುದೆ ?
ಮೃತ್ಯುವಿನ ಬಾಯ ತುತ್ತಾದ
ವೇಷಡಂಬಕರನೇನೆಂಬೆನಯ್ಯಾ ಗುಹೇಶ್ವರಾ ?

(ಗ. ೧೯, ವ. ೧)

೧೬೧

ನಾರು ಬೇರಿನ ಕುಟಿಲ ಕರ್ಮದ ಯೋಗವಲ್ಲಿದು ನಿಲ್ಲಿಭೋ.
ಕಾಯಸಮಾಧಿ ಕರಣಸಮಾಧಿಯೆಂಬುದು ಯೋಗವಲ್ಲದು ನಿಲ್ಲಿಭೋ.
ಜೀವಸಮಾಧಿಯೆಂಬುದು ನಿಜಸಹಜಸಮಾಧಿನಿಧಿ ಕಾಣಾ ಗುಹೇಶ್ವರಾ.

(ಗ. ೧೯, ವ. ೨)

೧೬೨

ಸಾಸುವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ!
ಘಳಿಗೆಯ ಬೇಟವ ಮಾಡಿಹೆನೆಂಬ ಪರಿಯು ನೋಡಾ!
ತನ್ನನಿಕ್ಕಿ ನಿಧಾನವ ಸಾಧಿಸಿಹೆನೆಂಬ
ಬಿನ್ನಾಣತಪ್ಪಿತ್ತು ಗುಹೇಶ್ವರಾ.

(ಗ. ೨೦, ವ. ೧)

೧೬೩

ಜವನ ಕದ್ದ ಕಳ್ಳನು ಅಗಲಿ ಮಿಕ್ಕಿ ಹೋದಡೆ
ಅಗಲಿಕೆ ಹಬ್ಬಿತ್ತು ಅಲ್ಲಲ್ಲಿ ನೋಡಲು.
ಶರಣಸಂಗವನರಸುವರೆಲ್ಲರು ಅಲ್ಲಲ್ಲಿಗೆ ನೋಡಿದರೆ.
ಸಾಧಕರೆಲ್ಲರೂ ಸಾಧಿಸಹೋಗಿ
ಆ ಭೇದವನರಿಯದೆ ಕೆಟ್ಟರು ಗುಹೇಶ್ವರಾ.

(ಗ. ೨೦, ವ. ೨)

೧೬೪

ದೇಶ ಗುರಿಯಾಗಿ ಲಯವಾಗಿ ಹೋದವರ ಕಂಡೆ.
ಕಾಮ ಗುರಿಯಾಗಿ ಲಯವಾಗಿ ಹೋದವರ ಕಂಡೆ.

ತಮಂಧ ಗುರಿಯಾಗಿ ಲಯವಾಗಿ ಹೋದವರ ಕಂಡೆ.
ನೀ ಗುರಿಯಾಗಿ ಹೋದವರ ಕಾಣೆ ಗುಹೇಶ್ವರಾ.

(ಗ. ೨೦, ವ. ೩)

೧೬೫

ಅಷ್ಟದಳ ಕಮಲದ ಹೂಗಲ್ಲ ಹಿಡಿದು
ಶೂನ್ಯಸಿಂಹಾಸನಕ್ಕೆ ಧವಳಾಲಯವೆತ್ತಿತ್ತು.
ಚಂದ್ರಕಾಂತದ ಶಿಲೆಯಲ್ಲಿ ಪಶ್ಚಿಮದ್ವಾರವಮಂ
ತೆಗೆದು ನೋಡುವರೆ ವಿಪರೀತ!
ಏಕೋಭಾವವೆಂಬುದೊಂದು ಕಂಭ
ಅದಕ್ಕೆ ಅನೇಕ ಚಕ್ರಂಗಳಡಗಿದ ಪ್ರಭೆಯೊಳಗೆ
ಬ್ರಹ್ಮರಂಧ್ರುವೆಂಬ ಮಸ್ತಕದ ಮೇಲೆ ಪವಳ ಪಂಜರಮಂ ಕಟ್ಟಿ
ಮೌಕ್ತಿಕದ ಮಾಲೆಯನಿಳಿಯಬಿಟ್ಟು
ಮಲಕು ಮಲಕಿನ ನಡುವೆ ಕಟ್ಟಿದ[೧] ನವರತ್ನದ ಗೊಂಡೆಯಂಗಳು
ಕಾಳಿಕೆಯು ಕಪ್ಪಡವದಕೆ ಮೇಲುವೊದಕೆ
ಉಲುಹಿನರಳೆಲೆಯು ಬಳಸುದೋರಣವ ಕಟ್ಟಿ
ದಶವಾಯುಗಳನೊಂದು ಮಾಡಿ
ಲಿಂಗಸುಖ ವಾಯುವ ಸಂತೈಸಿ
ಆಲವಟ್ಟವಂ ಮಾಡಿಸಿದ ಮಂದಾನಿಲನಮಲಗಂ ಮಾಡಿ
ಹರುಷವನೀವ ವಸಂತನ ಚೌಕವಟ್ಟಿಗೆಯ ಆಸನವಂ ಮಾಡಿ,
ನವನಾಳ ಸುನಾಳದೊಳು ಮೊರೆವ ಶಬ್ದವಂ
ಶುಕಪಿಕಭ್ರುಮರ ಮೋದವಮಂ ಮಾಡಿ
ಪರಮಶಾಂತಿಯೆಂಬ ಶೈತ್ಯಾಕಾರ
ಸೋಂಕಿನ ಚೂತಪಲ್ಲವಂಗಳಂ ಹಾಸಿ
ಉತ್ತರದ್ವಾರವೆಂಬ ನುಸುಳುಗಂಡಿಯಂ ರಚಿಸಿ
ಪೂರ್ವಯೋಗಂಗಳೆಂಬ ಸೋಪಾನವಮಂ ಮಾಡಿ
ಪಶ್ಚಿಮದ್ವಾರವೆಂಬ ನಿಜದ್ವಾರವಮಂ ಮಾಡಿ
ಸಪ್ತವ್ಯಸನ ಪಂಚೇಂದ್ರಿಯಂಗಳೆಂಬ ಪೌಳಿಯನಿಕ್ಕಿ
ಆಸೆ ಆಮಿಷಂ ಕೆಡಿಸಿ.
ಊರ್ಧ್ವಚಕ್ರವೆಂಬ ಮೇಲುಪ್ಪರಿಗೆಯಂ ಮಾಡಿ
ಸೂರ್ಯಚಂದ್ರರೆಂಬ ದೀವಿಗೆಗಳಂ ಬೆಳಗಿ
ಶಿವೋಹಮೆಂಬ ಮಹಾಶಿಖರಿಯ ಮೇಲೆ

---

೧+ವು (ಪ್ರ. ಲೀ.)

ಮಹಾಜ್ಞಾನಪ್ರಕಾಶವೆಂಬ ಹೊನ್ನ ಕಳಸವಮಂ ಮಾಡಿ
ಶೂನ್ಯಸಿಂಹಾಸವೆಂಬ ನಿರಾಳಸಿಂಹಾಸನಮಂ ಮಾಡಿದ
ಬಸವಪ್ರಿಯ ಕೂಡಲಚೆನ್ನಸಂಗನಲ್ಲಿ
ಎನ್ನ ಪರಮಗುರು ಸಂಗನ ಬಸವಣ್ಣನು.

(ಗ. ೨೧, ವ. ೧)

೧೬೬

ಅಂಗದ ಪ್ರಕೃತಿ ಲಿಂಗದಲ್ಲಿ ಅಳಿದು
ಮನದ ಪ್ರಕೃತಿ ಅರಿವಿನಲ್ಲಿ ಅಳಿದು
ಜೀವನ ಭ್ರಾಂತಿ ನಿಶ್ಚಿಂತದಲ್ಲಿ ಅಳಿದು
ನಿಶ್ಶೂನ್ಯ ನಿರಾಮಯವಾದ ನಿವಾಸಕ್ಕೆ
ಸದಾಚಾರವೆಂಬ ಕೆಸರುಗಲ್ಲನಿಕ್ಕಿ
ಸರ್ವಾಚಾರ ಸಂಪತ್ತೆಂಬ ಅಂತಃಕರಣ ಚತುಷ್ಟಯದ
ನಾಲ್ಕು ಕಂಭವಮಂ ನಿಲಿಸಿ
ಜ್ಞಾತೃವೆಂಬ ಭಿತ್ತಿಯ ಮೇಲೆ
ಜ್ಞಾನವೆಂಬ ಶಿಖರಿಯನನುಗೊಳಿಸಿ
ಜ್ಞೇಯವೆಂಬ ಹೊನ್ನುಕಳಸವಮಂ ಶೃಂಗಾರವಮಂ ಮಾಡಿ
ಬ್ರಹ್ಮರಂಧ್ರವೆಂಬ ಊರ್ಧ್ವದ್ವಾರವ ನಿಜದ್ವಾರವಮಂ ಮಾಡಿ
ನಿರ್ವಯಲ ನೆಲೆಗೊಳಿಸಿದ
ಬಸವಪ್ರಿಯ ಕೂಡಲಚೆನ್ನಸಂಗನ ಶರಣ
ಪ್ರಭುದೇವರ ಬರವಿಂಗೆ ಶೂನ್ಯಸಿಂಹಾಸನವ ರಚಿಸಿ
ಬರವ ಹಾರುತಿರ್ದನೆಮ್ಮ ಪರಮಗುರು ಬಸವಣ್ಣನು.

(ಗ. ೨೧, ವ. ೨)

೧೬೭

ಕೆದರಿದ ತಲೆಯ ನಡೆಯ ತೊನೆವ
ಹಣೆಯ ಬುಗುಟಿನ ಕರಸ್ಥಲದನುಮಿಷದಿಂದ
ಬಹಿರಂಗದ ವಚನ ತಪ್ಪಿ ಇದಿರುಗೊಯಿಲು ತಾಗಿ,
ಪುರ್ಬೊಡೆದು ಕಣ್ಣು ತರೆದು ಕಿವಿ ಹರಿದು
ಜೋರುವ ರಕ್ತದ ಧಾರೆಯ ಗಾಳಿಯ ಧೂಳಿಯ
ಮಳೆಯ ಜೋರಿನ ಬೆನ್ನ ಬಾಸುಳ

ಎಡಬಲದ ಬದಿಯದಟ್ಟಿನ ಮುಳ್ಳುದರಹಿನ
ಕಂಕುಳ ಸೀಳ ಕಂಡು ನೋಡುವ ಜನ ಬೆರಗಾಗೆ
ಪೊರವಾರಿನ ಮಸಿಯು ದಿಗಂಬರದಲ್ಲಿ ಬಣಗು ಸುರಿವುತ್ತೆ
ಆಪ್ಯಾಯನವರತು ಬಿದ್ದು ಮೊಣಕಾಲೊಡೆದು
ಹೊಸ ಹುಣ್ಣಿನ ರಕ್ತದ ಜೋರು ಹರಿದು
ಮುಂಗಾಲು ತಲೆಯೊಡೆದು ಕಣಕಾಲು ಸಂದು ತಪ್ಪಿ
ಕಿರುಬೆರಳು ಎಡಹಿ ಬೊಟ್ಟೊಡೆದು
ಗಾಯದ ಉಗುರು ಟೊಂಕದ ಪಿರುಚುಗಂಟಿನ
ನೋಡಾ ಚೆನ್ನಬಸವಣ್ಣಾ ; ಅತ್ಯಂತ ಮಲಿನ
ಕೂಡಲಸಂಗಮದೇವರ ಸುಳುಹು ವಿಪರೀತ
ನೋಡುವರೆ ಭಯಂಕರವಾಗಿದೆಯಯ್ಯಾ.

(ಗ. ೨೨, ವ. ೧)

೧೬೮

ಅಟ್ಟಹಾಯ್ವುತ್ತ ಭೋಂಕನೆ ನಿಲುತ್ತ
ಒಮ್ಮೆ ಬೀಗಿ ನಗುತ್ತ
ಮತ್ತೊಮ್ಮೆ ಮರುಳನಂತೆ ಮಂಕಿನಂತೆ
ದೆಸೆದೆಸೆ ನೋಡುತ್ತ.
ಅಂಗಡಿಯ ರಾಜಬೀದಿಯ ಶೃಂಗಾರಂಗಳ
ನಲಿನಲಿದು ನೋಡುತ್ತ
ಇತ್ತರದ ಭದ್ರದ ಮೇಲೆ ನಾಟ್ಯವನಾಡುವರಿಗೆ
ಇದಿರಾಗಿ ತಾ ಮರಳಿ ಆಡುತ್ತ ಹಾಡುತ್ತ
ಬೈವುತ್ತ ಕೆರಳಿ ನುಡಿವುತ್ತ
ವಾದ್ಯದ ಮೇಳಾಪವ ಕಂಡು ಆಳಿಗೊಂಡು ನಗುತ್ತ
ಹಸ್ತವನಾಡಿಸಿ ಗತಿಯನುಚ್ಚರಿಸಿ
ಕೈಯೊಡನೆ ಮರುಳಾಟವನಾಡುತ್ತ
ಮೆಲ್ಲಮೆಲ್ಲನೆ ನೋಡಿ ನಿಂದು ನಡೆವುತ್ತ
ಎಂದಿನ ಸುಳುಹಿನೊಳಲ್ಲದ ಸುಳುಹು
ಬಸವಣ್ಣಾ ನಿಮ್ಮಾಣೆ, ಸೊಡ್ಡಳನಾಗದೆ ಮಾಣನು.

(ಗ. ೨೨, ವ. ೨)

೧೬೯

ಬಾಲನಹನೊಮ್ಮೆ ಬೋಳನಹನೊಮ್ಮೆ
ವೃದ್ಧನಹನೊಮ್ಮೆ ಮತ್ತನಹನೊಮ್ಮೆ
ಹೊಳೆದು ತೋರುವನೊಮ್ಮೆ; ತೋರಿ ಅಡಗುವನೊಮ್ಮೆ
ವಿಶ್ವನೋಡಿ ಬೆರಗಾಗುತ್ತಿರೆ
ಇದ್ದ ಠಾವಿನಲ್ಲಿದ್ದು ಮುಂದೆ ತೋರುತ್ತಿರಲು
ಸಂಪ್ರದಾಯದವರು ಒಡನೊಡನೆ ಹರಿದು ಬಂದು
ಹೊತ್ತೆ ಸಾರಿದ ಬಸವಣ್ಣನ ಮಹಾಮನೆಯಲಿ ಎತ್ತಿ ನೋಡಿ
ಮುಗಿಲಮಾಲೆಯು ತಪ್ಪದೆ
ಕುಸುರಿಗೆಲಸದ ನಂದಿಯ ಮಂಟಪದ ಮೇಲೆ
ಉಪ್ಪರಿಗೆಯ ಭದ್ರಂಗಳ ನೋಡಿದ ಭುವನ ಭುವನೇಶ್ವರ
ಹಿಂದು ಮುಂದೆ ಎಡಬಲವ ನೋಡಿ ನಗುತ್ತ
ಮುತ್ತಿನ ತೋರಣಕ್ಕೆ ಹಾರೈಸಿ
ಬಸವಣ್ಣನವರ ಮನೆಯ ಹೊಕ್ಕ ಕಲಿದೇವರ ದೇವನು.

(ಗ. ೨೨, ವ. ೩)

೧೭೦

ಬಲಕೆ ಮುರಿದನು ಪೌಳಿಯ ಉತ್ತರದ ಬಾಗಿಲಲ್ಲಿ.
ತಲವಾಗಿಲ ಹೊಕ್ಕ ಗತಿಯ ಪವಣೆನಲ್ಲಿ.
ಧವಳಾರ ಪಶ್ಚಿಮದ್ವಾರವೆಂಬ
ತ್ರಿವಿಧಗತಿಯ ಸಿಂಹಾಸನದ ಮೇಲೆ
ಮುಕ್ತಕೇಶದ ಪರಮಗುರುರಾಯನೇರಿದ ನೋಡಾ.
ಕಲಿದೇವರದೇವ ಸಿಂಹಾಸನದ ಮೇಲೆ.

(ಗ. ೨೨, ವ. ೪)

೧೭೧

ಇದ್ದ ಪರಿಯೆಂತುಟಿದೆ ನೋಡಯ್ಯಾ
ನಿಂದರೆ ನೆಳಲಿಲ್ಲ; ನಡೆದರೆ ಹೆಜ್ಜೆಯಿಲ್ಲ.
ಭೂತಳದೊಳಗೆ ತಾನು ಕಂಡುದು ಇಲ್ಲ
ಇಂತಪ್ಪ ಆನೆಯ ಮದ ಸುಳುಹು ಅರಿದು
ಜಂಗಮಸ್ಥಲ ಇಂತುಟಲ್ಲದೆ ಮತ್ತೆಂತುಟು ಹೇಳಾ ?
ಅಪ್ಯಾಯನದರಿಕೆಯ ಹೊಲಬು ಕಾಣಬಾರದು.

ಊಡಿದಡೆ ಉಂಬನೋ ಉಣ್ಣನೋ ಎಂಬುದುಂಟಾದಡೆ
ನೀಡುವೆನು ಕೂಡಲಸಂಗಮದೇವರಿಗೆ
ಚೆನ್ನಬಸವಣ್ಣನಹುದಹುದೆನಲಿಕೆ.

(ಗ. ೨೨, ವ. ೫)

೧೭೨

ಒಂದಾದುದು ಎರಡಪ್ಪುದೆ ? ಎರಡಾದುದು ಒಂದಪ್ಪುದೆ?
ಪರಿಣಾಮದ ವೇಳೆಯಲ್ಲಿ ಸಂದೇಹಿಸಲುಂಟೆ ?
ಬಂದ ಜಂಗಮದ ನಿಂದ ನಿಲವನರಿಯದೆ
ಒಂದನೆಣಿಸಿ ಹಲವ ಹಂಬಲಿಸುವರೆ ?
ಈ ಒಂದು ನಿಲವಿಂಗೆ ಪರಿಣಾಮವ ಮಾಡಬಲ್ಲಡೆ
ನಿನ್ನ ಲಕ್ಷದ ಮೇಲೆ ತೊಂಬತ್ತಾರುಸಾವಿರ ಜಂಗಮಕ್ಕೆ
ಪರಿಣಾಮವಹುದು ನೋಡಾ!
ಗುಹೇಶ್ವರಲಿಂಗದ ನಿಲವನರಿಯದೆ
ಮರುಳಾದೆಯಲ್ಲಾ ಸಂಗನಬಸವಣ್ಣಾ !

(ಗ. ೨೩, ವ. ೧)

೧೭೩

ದೇವದೇವ ಮಹಾಪ್ರಸಾದ ನಿಮ್ಮಡಿಗಳಿಂದಂತಲ್ಲದೆ
ಬೇರೆ ಸ್ವತಂತ್ರವುಂಟೆ ? ಸಂದು ಸಂಶಯವುಂಟೆ ?
ದರ್ಪಣದೊಳಗಣ ಪ್ರತಿಬಿಂಬವ ನೋಡುವ ಮುಖಕ್ಕೆ
ಭಿನ್ನಭಾವವುಂಟೆ ?
ಚರಿಸಿ ಬಹ ಅನಂತ ಸುಳುಹಿನೊಳಗೆ ನೀನೊಬ್ಬ
ನಿಮ್ಮೊಳಗೆ ಮಾಡಿದ ಸಯದಾನವ ನಿಮಗೆ ನೀಡುವೆ
ಅವಧರಿಸಯ್ಯಾ ಕೂಡಲಸಂಗಮದೇವ ಪ್ರಭುವೆ.

(ಗ. ೨೩, ವ. ೨)

೧೭೪

ಹೆಡಗೆ ಹಾರ, ಮೊರ ಹಾರ, ಕೆರಸಿ ಹಾರ, ಮಡಕೆ ಹಾರ
ದೆಸೆದೆಸೆಯಲ್ಲಿ ತಂದು ನೀಡುತ್ತಿರಲು
ಹೊಸಪರಿಯ ಆರೋಗಣೆಯ ಅವಧರಿಸುತಿರ್ದನು.
ಆವಾವ ದೆಸೆಗಳಲ್ಲಿ ನೀಡುತ್ತಿರ್ದರೆ

ಆ ದೆಸೆಗಳೆಲ್ಲಾ ಬಾಯಾಗಿ ಕೊಳುತ್ತಿರ್ದನು.
ಎತ್ತೆತ್ತ ನೋಡಿದರೆ ಅತ್ತತ್ತ ಮುಖವಗೆಯ ಹೊಯ್ದಂತೆ
ತೆರಹಿಲ್ಲದೊಂದು ನಿಮಿಷ ಎಡಹಿದರೆ
ಅಕ್ಕಿಗಚ್ಚು ತವುಡು ಮೊದಲಾದ ಪದಾರ್ಥಂಗಳೆಲ್ಲಾ ಸಂದವು.
ನಿಮಿಷದಲ್ಲಿ ಭಕ್ತಿಬಂಧುಗಳೆಲ್ಲರು
ತಮ್ಮ ತಮ್ಮ ಮತದಲಾ ಸಮುದಾಸಂಗಳ ತಂದು ನೀಡುತ್ತಿರೆ
ಅದ್ಭುತ ಆರೋಗಣೆಯ ಕಂಡು
ಪಾಕಪ್ರಯತ್ನವ ಮಾಡಿಯೆನುತ್ತ
ಬಸವಪ್ರಿಯ ಕೂಡಲಚೆನ್ನಸಂಗನಲ್ಲಿ
ಸಂತೋಷದಲ್ಲೋಲಾಡುತ್ತಿರ್ದ ಪರಮಗುರು ಬಸವಣ್ಣನು.

(ಗ. ೨೩, ವ. ೩)

೧೭೫

ಗುರುವೇ ಬೋನ ಶಿಷ್ಯನೇ ಪದಾರ್ಥ
ಲಿಂಗಕ್ಕೆ ಆ ಪದಾರ್ಥವರ್ಪಿತವಯ್ಯಾ
ಘನಕ್ಕೆ ಮನವೇ ಅರ್ಪಿತ
ಘನದೊಳಗೆ ಮನವು ತಲ್ಲೀನವಾದ ಬಳಿಕ
ಅರ್ಪಿಸುವ ಭಕ್ತರಾರು ? ಆರೋಗಿಸುವ ದೇವರಾರು ?
ನಿತ್ಯತೃಪ್ತ ಉಣಕಲಿತನೆಂದರೆ ಅರ್ಪಿಸಲುಂಟೆ ದೇವಾ!
ಮತ್ತೊಂದೊಮ್ಮೆ
ಕೂಡಲಚೆನ್ನಸಂಗಮದೇವ ಪ್ರಭುವೆ,
ಸುಚಿತ್ತದಿಂದ ಆರೋಗಿಸಯ್ಯಾ!

(ಗ. ೨೩, ವ. ೪)

೧೭೬

ಮನಯುಕ್ತಿ ವಿವೇಕವೆಂಬ ಅಕ್ಕಿಯನ್ನು
ಗುಪ್ತವೆಂಬ ಒರಳೊಳಗಿಕ್ಕಿ
ಅಭಿನ್ನ ಮಥನವೆಂಬ ಒನಕೆಯಲ್ಲಿ ಥಳಿಸಿ
ಕಲ್ಮಷವೆಂಬ ತವುಡ ಹಾರಿಸಿ,
ಸಮತೆ ಸಲಿಲದಲ್ಲಿ ಜಾಳಿಸಿ,
ಅಳುಪೆಂಬ ಹರಳ ಕಳೆದು,
ದಯಾಮೃತವೆಂಬ ಹಾಲ ಬೋನವ ಮಾಡಿ,

ನೆನಹಿನ ಅವಲಂಬಿಕೆಯ ಅಭಿಘಾರವಾಗಿ
ನಿರ್ಮಳವೆಂಬ ಶಿವದಾನವನಳವಡಿಸಿ ಕಾದಿರ್ದರಯ್ಯಾ.
ಪಂಚೇಂದ್ರಿಯವೆಂಬ ಸೊಣಗ ಮುಟ್ಟದಹಾಗೆ ಕಾದಿರ್ದರಯ್ಯಾ.
ಷಡುವರ್ಗವೆಂಬ ತೊತ್ತಿರು ಮುಟ್ಟದ ಹಾಗೆ ಕಾದಿರ್ದರಯ್ಯ.
ಅಷ್ಟಮದವೆಂಬ ಮಕ್ಕಳು ಮುಟ್ಟದಂತೆ ಕಾದಿರ್ದರಯ್ಯಾ.
ಇನಿತು ಮುಖ್ಯವಾದ ಹೀನಂಗಳಾವಾವವು
ಮುಟ್ಟದಂತೆ ಕಾದಿರ್ದರಯ್ಯಾ ಬೋನವ:
ಗುಹೇಶ್ವರಲಿಂಗಕ್ಕೆ ಅರ್ಪಿತವಾಯಿತ್ತು ಕಾಣಾ ಚನ್ನಬಸವಣ್ಣಾ.

(ಗ. ೨೩, ವ, ೫)

೧೭೭

ಭಕ್ತಿಯುಕ್ತಿಯ ಹೊಲಬ ಮೂರುಲೋಕದೊಳಗೆ
ಬಲ್ಲವರನಾರನೂ ಕಾಣೆನು.
ಲಿಂಗದಲ್ಲಿ ಭಕ್ತಿಯ ಮಾಡಿದರೆ,
ಭವಹರಿಯದೆಂದು ಜಂಗಮಮುಖ ಲಿಂಗವೆಂದರಿದು
ಅರ್ಚಿಸಿ ಪೂಜಿಸಿ ದಾಸೋಹವ ಮಾಡಿ ಪ್ರಸನ್ನತೆಯ ಪಡೆದು
ಆ ಪ್ರಸನ್ನತೆಯ ರುಚಿಯನುಪಮಿಸಬಾರದು.
ಬಸವಣ್ಣನ ಭಕ್ತಿಪ್ರಸಾದವಕೊಂಡು
ಅಲ್ಲಮಾಪ್ರಭು ತೃಪ್ತನಾದನು.
ಅಲ್ಲಮಾಪ್ರಭು ಕೊಂಡ ಪ್ರಸಾದದ ತೃಪ್ತಿ
ಲಕ್ಕದ ಮೇಲೆ ತೊಬ್ಬತ್ತಾರುಸಾವಿರ ಜಂಗಮಕ್ಕೆ ತೃಪ್ತಿಯಾಯಿತು.
ಆ ಲಕ್ಕದ ಮೇಲೆ ತೊಬತ್ತಾರುಸಾವಿರ ಜಂಗಮ ತೃಪ್ತಿಯಾದಲ್ಲಿ
ಸಚರಾಚರವೆಲ್ಲ ತೃಪ್ತಿಯಾಯಿತು.
ಇಲ್ಲವೆಂದು ಬಿಜ್ಜಳನು ತರ್ಕಿಸಲು ಕಪ್ಪೆಯ ಒಡಲೊಳಗೆ
ಪ್ರಸಾದವ ತೋರಿದ ಬಸವಣ್ಣನು.
ಇದು ಕಾರಣ ಕೂಡಲಚೆನ್ನಸಂಗಮದೇವರಲ್ಲಿ
ಬಸವಣ್ಣ, ಪ್ರಭುದೇವರ ಪ್ರಸಾದದ ಘನವು
ತ್ರೈಲೋಕದೊಳಗೆ ಬೆಳಗೆ ಬೆಳವಿಗೆಯಾಯಿತ್ತು.

(ಗ. ೨೩, ವ. ೬)

೧೭೮

ತೊರೆಯುದಕವ ಕೆರೆಯುಂಡು ತೃಪ್ತಿಯಾಗಲು
ಆ ಕೆರೆಯುದಕವ ಹಲವು ಕೆಲವು
ಸ್ಥಾವರ ಜಂಗಮಂಗಳುಂಡು ತೃಪ್ತಿವಡುವಂತೆ

ಪ್ರಭುದೇವರ ಪ್ರಸಾದದ ಘನವು
[ಪ್ರಭುದೇವರ] ತೃಪ್ತಿ ಅಸಂಖ್ಯಾತ ಮಹಾಗಣಂಗಳೆಲ್ಲಕ್ಕೆ
ತೃಪ್ತಿಯಾಯಿತ್ತು ನೋಡಾ.
ಬಸುರಿ ಹೆಂಗಸು ಉಂಡಲ್ಲಿ ಒಡಲ ಶಿಶು ತೃಪ್ತಿಯಾದಂತೆ
ಸಚರಾಚರವೆಲ್ಲವು ತೃಪ್ತಿಯಾದವು ನೋಡಾ.
ಕೂಡಲಸಂಗಮದೇವ, ಪ್ರಭುದೇವರ
ಪ್ರಸಾದದ ಮಹಿಮೆಗೆ ನಮೋ ನಮೋ ಎಂಬೆನು.

(ಗ. ೨೩. ವ. ೬)

೧೭೯

ಹಸಿವಿನ ಪ್ರೇಮಕ್ಕೆ ಬೋನವ ಹಿಡಿವರು
ತೃಷೆಯ ಪ್ರೇಮಕ್ಕೆ ಮಜ್ಜನಕ್ಕೆರೆವರು
ದೇವರಿಲ್ಲ, ಭಕ್ತರಿಲ್ಲ; ನಾನೂ ಇಲ್ಲ, ನೀನೂ ಇಲ್ಲ;
ಗುಹೇಶ್ವರನ ಪೂಜಿಸುವರೂ ಇಲ್ಲ
ಪೂಜೆಗೊಂಬವರೂ ಇಲ್ಲ ಕಾಣಾ, ಸಂಗನಬಸವಣ್ಣಾ.

(ಗ. ೨೪. ವ. ೧)

೧೮೦

ಭಾವವಳಿಯದು ಬಯಕೆ ಸವೆಯದು
ಐಕ್ಯನಾದಹೆನೆಂದರೆ ಏನಹುದೋ ಸಬುದ ಸಂಭ್ರಮವಳಿಯದೆ ?
ತನ್ನ ಇದಿರಲ್ಲಿ ಪ್ರತಿಗಂಡಡಹುದೆ ?
ಗುಹೇಶ್ವರನೆಂಬ ಸಂಬಂಧ ಸಂದವಳಿಯದೆ
ಸತ್ತು ಬಯುಸುವಂಗಾಯುತವಹುದೆ ?

(ಗ. ೨೪, ವ. ೨)

೧೮೧

ಹೊರಸಿನೆಕ್ಕಿಗೆ ಶಂಖದಮಣಿ ಪವಣಿಸುವವರು
ನೀವಾರಾದಡೂ ಪವಣಿಸಿಭೋ; ಇದ ನಾನರಿಯೆನು.
ಒಂದು ತಾಳ ಮರದ ಮೇಲೆ
ಮೂರು ರತ್ನವಿಹುದ್ದನ್ನಾ ಬಲ್ಲೆ.
ಒಂದು ರತ್ನ ಹದಿನಾಲ್ಕು ಭುವನಕ್ಕೆ ಬೆಲೆಯಾಯಿತ್ತು
ಇನ್ನೊಂದು ರತ್ನಕ್ಕೆ ಬೆಲೆಯಿಲ್ಲವೆಂದು

ಗುಹೇಶ್ವರ ಲಿಂಗೈಕ್ಯವು
'ನಿಶ್ಶಬ್ದ ಬ್ರಹ್ಮ ಉಚ್ಚತೆ' ಎಂದುದಾಗಿ.

(ಗ. ೨೪, ವ. ೩)

೧೮೨

ಕಾಯದೊಳಗಣ ಜೀವವ ಮೀರಿಹೋಹ ಕಳ್ಳನ ಸಂಗ ಬೇಡ.
ನಿಮ್ಮ ನಿಮ್ಮ ವಸ್ತುವ ಸುಯಿದಾನವ ಮಾಡಿ
ಗುಹೇಶ್ವರನೆಂಬ ಕಳ್ಳನ ಕೊಂದರೆ
ಅಳುವರಾರೂ ಇಲ್ಲ!

(ಗ. ೨೪, ವ. ೪)

೧೮೩

ಆದಿಯನರಿಯದೆ ಅನಾದಿಯಿಂದತತ್ತ
ತಾನಾರೆಂಬುದು ತಿಳಿದು ವಿಚಾರಿಸದೆ ಮಾಡಿದ ಫಲವೇನಯ್ಯಾ ?
ಸಾವನ್ನಕ್ಕರ ಸಾಧನೆಯಂ ಮಾಡಿದಡೆ
ಕಾದುವ ದಿನವಾವುದಯ್ಯಾ ಬಸವಣ್ಣಾ ?
ಬಾಳುವನ್ನಕ್ಕರ ಭಜನೆಯಂ ಮಾಡಿದಡೆ
ತಾನಹ ದಿನವಾವುದಯ್ಯಾ ಬಸವಣ್ಣಾ ?
ಇದು ಕಾರಣ, ಮಿಥ್ಯವನೇ ಹಿಡಿದು ಮಿಥ್ಯವನೇ ಪೂಜಿಸಿ
ಮರ್ತ್ಯಲೋಕದ ಭಕ್ತರೆಲ್ಲ ವ್ಯರ್ಥವಾದರಲ್ಲಾ!
ತಮ್ಮ ತಾವು ಕೆಟ್ಟ ಕೇಡಿಂಗೆ ಬೆರಗಾದೆ.
ಕಣ್ಣ ಕಳೆದುಕೊಂಡು, ಹೊಟ್ಟೆ ಸೀಳಿ,
ಮಗನ ಬಾಣಸವ ಮಾಡಿ,
ಕೈಲಾಸಪುರಕ್ಕೆ ಹೋದವರೆಲ್ಲರು ಭಕ್ತರೆ ?
ಅವರಿಗೆ ಶಿವಪಥ ಸಾಧ್ಯವಾಯಿತ್ತೆ ? ಭವಹಿಂಗಿತ್ತೆ ?
ಅಸುರ ಕರ್ಮಿಗಳ ಮಾತಂತಿರಲಿ,
ನರಲೋಕದ ನರಗುರಿಗಳೆಲ್ಲಾ ನರಸಂಸಾರಕ್ಕೊಳಗಾದರು.
ಸುರಲೋಕದ ಸುರರುಗಳೆಲ್ಲಾ ಸುರಸಂಸಾರಕ್ಕೊಳಗಾದರು.
ರುದ್ರಲೋಕದ ರುದ್ರರುಗಳೆಲ್ಲಾ ರುದ್ರಸಂಸಾರಕ್ಕೊಳಗಾದರು.
ಮುನಿಜನಂಗಳೆಲ್ಲಾ ತಪಸಂಸಾರಕ್ಕೊಳಗಾದರು.
ಲಿಂಗವ ಹಿಡಿದವರೆಲ್ಲಾ ಫಲಪದವೆಂಬ ಸಂಸಾರಕ್ಕೊಳಗಾದರು.
ಜಂಗಮವ ಅರ್ಚಿಸಿದವರೆಲ್ಲಾ ಸಾಯುಜ್ಯವೆಂಬ ಸಂಸಾರಕ್ಕೊಳಗಾದರು

ಇಂತೀ ಸಂಸಾರಕ್ಕೊಳಗಾದವರೆಲ್ಲಾ,
ಮಾಯೆಯ ಹೊಡಗಿಚ್ಚು ಗೆಲಬಲ್ಲರೆ ?
ಅದೆಂತೆಂದಡೆ: ನಿತ್ಯ ನಿಜಾತ್ಮ ತಾನೆಂದರಿಯದೆ,
ತತ್ವಮಸಿಯೆಂಬ ವಾಕ್ಯವನರಿಯದೆ
ಹೊರ ಹೊರಗೆ ಬಳಸಿ ಕೆಟ್ಟರೆಲ್ಲಾ ಹಿರಿಯರು!
ಸತ್ತರಲ್ಲಾ ನಾಯ ಸಾವ!
ಸತ್ತವರ ಹೆಸರ ಪತ್ರವನೋದಿ
ಎತ್ತಳ ಮುಕ್ತಿಕಾಣಾ ಗುಹೇಶ್ವರಾ ?

(ಗ. ೨೫, ವ. ೧)

೧೮೪

ಪರುಷಕ್ಕೆ ಬೆಲೆಯುಂಟೆ ?
ಪ್ರಾಣಕ್ಕೆ ನಿರ್ಮಾಲ್ಯವುಂಟೆ?
ರುಚಿಗೆ ಎಂಜಲುಂಟೆ ?
ಸುಖಕ್ಕೆ ಅರೋಚಕವುಂಟೆ ?
ಗುಹೇಶ್ವರಾ ನಿಮ್ಮನರಿದ ಶರಣರಿಗೆ, ಭವಬಂಧನವುಂಟೆ ?

(ಗ. ೨೫, ವ.೨)

೧೮೫

†ಅಯ್ಯಾ, ನಿಮ್ಮ ಗುಹೇಶ್ವರ ಶರಣ ಬಂದು ಬಾಗಿಲಲ್ಲಿರಲು
ತೆರಹುಮರಹಾದು[೧] [ದು][೨] ಸಿರವು.
ನಾನು ಹಮ್ಮೈಸಿ ಹೆದರಿದೆ ನೋಡಯ್ಯಾ,
ಕೆಟ್ಟೆ ನೋಡಾ; ನಾನು ಕೆಟ್ಟಕೇಡಿಂಗೆ ಕಡೆಯಿಲ್ಲಯ್ಯಾ.
[ಕೂಡಲಸಂಗಮದೇವಾ]
ಎನ್ನ ಭಕ್ತಿ ಸಾವಿರ ನೋಂಪಿಯ
ಒಂದು ಹಾದರದಲ್ಲಿ ಅಳಿದಂತಾಯಿತ್ತಯ್ಯಾ.

---

೧-೨ದ(ಮೂಲ)

† ಇಲ್ಲಿಂದ ಮುಂದೆ ಬರುವ ವಚನಗಳನ್ನು ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿಭಾಂಡಾರದಲ್ಲಿರುವ "ಪ್ರಭುಲಿಂಗಲೀಲೆಯ ವಚನಗಳು" (ಹ.ಪ್ರ.ಸಂ. ೧೨೫೭) ಕಟ್ಟಿನಿಂದ ಸೇರಿಸಿ ಕೊಳ್ಳಲಾಗಿದೆ. ಮುದ್ರಿತ ಪ್ರಭುಲಿಂಗಲೀಲೆಯಲ್ಲಿ ಇವು ಇಲ್ಲ.

೧೮೬

ಕಾಯದ ಕಪಟವು ಬಿಡದೆನಗಿನ್ನೆಂತಯ್ಯಾ ?
ಮಾಯಾ ಪ್ರಪಂಚಿನ ಬಲೆಯಲ್ಲಿ ಸಿಲುಕಿದೆ.
ವಾಯುದ ಸಂಭ್ರಮ ಹಿರಿದೆನಗೆ
ಇದಾವ ಭಾವದ ಮುಖವೆಂದರಿಯದೆ
ಜ್ಞಾನಶೂನ್ಯನಾಗಿರ್ದೆನಯ್ಯಾ.
ಅಷ್ಟಮದಂಗಳ ಸೃಷ್ಟಿಸಿದ್ದಿರಾಗಿ
ಕಟ್ಟುಗ್ರದಿಂದ ನಿಮ್ಮ ಕಾಣಲೀಯವು.
ಎನ್ನ ತನುವಿನ ಅವಗುಣ, ಮನದ ಮರ್ಕಟತನ ಬಿಡದು.
ನನಗಾವುದು ಗತಿ ಹೇಳಾ ?
ಕೂಡಲಸಂಗಮದೇವಯ್ಯಾ, ನಿಮ್ಮ ಶರಣರ ನಿಲವನರಿಯದೆ
ಭವದುಃಖಿಯಾದೆನಯ್ಯಾ.

೧೮೭

ನಡುದೊರೆಯೊಳಗೆ ಹರುಗೋಲಸುಳಿದಂತಾಯಿತ್ತೆನ್ನ ಭಕ್ತಿ.
ಮರನೇರಿ ಕೈ ಬಿಟ್ಟಂತಾಯಿತ್ತೆನ್ನ ಮುಕ್ತಿ.
ಶಿವಶಿವಾ, ಗೋಳಿಟ್ಟೆನಯ್ಯಾ.
ಗುರುವೆ ಕೂಡಲಸಂಗಮದೇವಯ್ಯಾ
ಮರುಳ ಶಂಕರನ ಕೃಪೆಯೆನಗೆ ಇನ್ನೆಂತಹುದಯ್ಯಾ ?

೧೮೮

ಹೂ ಮಿಡಿ ಪರಿದು ಒತ್ತಿ ಹಣ್ಣ ಮಾಡುವೆನೆಂದರೆ ಹಣ್ಣಾಗಬಲ್ಲುದೆ ?
ಪರಿಮಳವಿಲ್ಲದ ನನೆಯನರಳಿಸಿ ಮುಡಿದಿಹೆನೆಂದರೆ ಸೌರಭವುಂಟೆ ?
ಶಿವಶಿವಾ, ಶಿವಶರಣರ ನಿಲವು ಕಾಬಕಾಲಕ್ಕೆ ಕಾಣಬಹುದಲ್ಲದೆ
ಎಲ್ಲಾ ಹೊತ್ತು ಕಾಣಬಾರದು ನೋಡಾ.
ಅಹ ಕಾಲಕ್ಕೆ ತಾನೆಯಹುದು.
ಗುಹೇಶ್ವರನ ಶರಣರ ಕಂಡ ಬಳಿಕ
ಮರಹು ಬೆಳಗ ಕಂಡ ಕತ್ತಲೆಯಂತೆ
ನೋಡ ನೋಡಲು ಹರಿವುದು!

೧೬೯

ಮುಗಿಲ ಮರೆಯ ಮಿಂಚಿನಂತೆ
ಒಡಲಮರೆಯ ಆತ್ಮನಂತೆ ಇಪ್ಪ
[ನಿಮ್ಮ] ನಿಲವ ಇನ್ನಾರು ಬಲ್ಲರು ನೋಡಾ ದೇವಾ ?
ನಾ ನಿಮ್ಮನರಿಯದೆ ಮತಿಗೆಟ್ಟು ಮರುಳಾದೆ.
ಎನ್ನ ತಪ್ಪಿಗೆ ಕಡೆಯಿಲ್ಲ. ಕ್ಷಮಿಸ ಬೇಕಯ್ಯಾ.
ತ್ರಾಹಿ ತ್ರಾಹಿ ಕೂಡಲಸಂಗಮದೇವಯ್ಯಾ.

೧೭೦

ನಿಮ್ಮ ಶರಣನ ನಿಲವ
ಸ್ವರ್ಗ ಮರ್ತ್ಯ ಪಾತಾಳದವರು ಆರಾರೂ ಬಲ್ಲವರಿಲ್ಲವಯ್ಯಾ
ಅಘಟಿತ ಘಟಿತರು, ಅಖಂಡ ಮಹಿಮರು.
ನಿಜದಲ್ಲಿ ನಿರ್ಲೇಪ ಭಾವಕರು.
ಕೂಡಲಸಂಗಮದೇವಯ್ಯ,
ನಿಮ್ಮ ಶರಣರ ಘನವನರಿವಡೆ ನಾನೇತರವನಯ್ಯಾ ?

## ಶಿವತತ್ವ ಚಿಂತಾಮಣಿ

೧೯೬

‘ಈಶ್ವರಸ್ಯ ಸದ್ಭಾವೇ ಕಿಂ ಪ್ರಮಾಣಂ’
ಎಂಬ ಮೀಮಾಂಸಕನ ಮೂಗನು
‘ಓಂ ದ್ಯಾವಾ ಭೂಮೀಜಯನ್ ದೇವ ಏಕಃ’ ಎಂಬ
ಸುರಗಿಯಲಿರಿದು ವೈಶೇಷಿಕವೆಂಬ ಇಟ್ಟಿಗೆಯಲೊರಸುವೆ,
ಕೂಡಲಸಂಗಯ್ಯನೆಂಬ ಕನ್ನಡಿಯತೋರುವೆ.

(ಸಂ-೩೩, ಪ. ೧೭ರ ನಂತರ)

೧೯೭

ದೇವಲೋಕಕ್ಕೆ ಸರಿ ಬೇರೆ ಲೋಕವಿಲ್ಲ.
ಶಿವಮಂತ್ರಕ್ಕೆ ಸರಿ ಬೇರೆ ಮಂತ್ರವಿಲ್ಲ.
ಜಗಕಿಕ್ಕಿದೆ ಮುಂಡಿಗೆಯನೆತ್ತಿಕೊಳ್ಳಿ
ಕೂಡಲಸಂಗಯ್ಯನಲ್ಲದೆ ಬೇರೆ ದೈವವಿಲ್ಲ.

(ಸಂ. ೩೩ ಪ. ೨೬ರ ನಂತರ)

೧೯೮

ನೀನಲ್ಲದನ್ಯದೈವವುಂಟೆಂಬನ ಬಾಯನು
ಕೆನ್ನೈವಾರ ಸೀಳಿದಲ್ಲದೆ ಎನ್ನ ಮುಳಿಸು ಹೋಗದಯ್ಯ.
ಎನ್ನ ಬಿನ್ನಪವನವಧಾರು ಕೂಡಲಸಂಗಯ್ಯ.

(ಸಂ. ೩೩ ಪ. ೨೪ರ ನಂತರ)

# ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ

## ಭಾಗ-೧

೧೯೯

ಕೋಣನ ಕೊಂಬಿನ ಮೇಲೆ ಏಳನೂರೆಪ್ಪತ್ತು ಸೇದಿ ಬಾವಿ.
ಆ ಬಾವಿಯೊಳಗೊಂದು ಬಗರಿಗೆ.
ಆ ಬಗರಿಗೆಯೊಳಗೊಬ್ಬ ಸೂಳೆ.
ಆ ಸೂಳೆಯ ಕೊರಳೊಳಗೆ
ಏಳನೂರೆಪ್ಪತ್ತಾನೆಯೇರಿತ್ತ ಕಂಡೆ ಗುಹೇಶ್ವರಾ.

(ಕಥೆ. ೨೮)

೨೦೦

ಗರ್ಭದಲ್ಲಿರ್ದ ಶಿಶುವು ನವಮಾಸವ ಬಯಸುವಂತೆ
ನಿಮ್ಮ ಬರವ ಹಾರೈಸಿಕೊಂಡಿರ್ದೆನು.
ಇನ್ನು ನನ್ನ ಜನ್ಮ ಸಫಲವಾಯಿತು.
ಬಸವಣ್ಣ ಮೊದಲಾದ ಪ್ರಮಥರಿಗೆ ನಮಿಸಿ
ನಾನು ಬದುಕಿದೆನು ಕಾಣಾ,
ಶುದ್ಧಸಿದ್ಧ ಪ್ರಸನ್ನ ಪ್ರಭುವೆ ಶಾಂತಮಲ್ಲಿಕಾರ್ಜುನಯ್ಯ.

(ಕಥೆ-೧೧೮)

೨೦೧

ಉಣಲುಡಲು ಮಾರಿಯಲ್ಲದೆ
ಕೊಲ್ಲಲು ಕಾಯಲು ಮಾರಿಯೆ ?
ಅಂದು ತನ್ನ ಮಗನ ಜವನೊಯ್ವಾಗ
ಎತ್ತ ಹೋದಳು ಮಾರಿಕವ್ವೆ ?
ಈವರೆ ಕಾಯ್ವರೆ ನಮ್ಮ ಕೂಡಲಸಂಗನಲ್ಲದೆ
ಮತ್ತೊಂದು ದೈವವಿಲ್ಲ ಕಾಣಿಭೋ!

(ಕಥೆ. ೧೨೩)

೨೦೨

ತನುವ ಬೇಡಿದಡೀವೆ, ಮನವ ಬೇಡಿದಡೀವೆ.
ಧನವ ಬೇಡಿದಡೀವೆ, ಬೇಡು ಬೇಡು ಎಲೆ ತಂದೆ;
ಕಣ್ಣ ಬೇಡಿದಡೀವೆ, ತಲೆಯ ಬೇಡಿದಡೀವೆ.
ಕೂಡಲಸಂಗಮದೇವಾ, ನೀ ಬೇಡಿದುದನಿತ್ತು
ಶುದ್ಧನಾಗಿಪ್ಪೆ ನಿಮ್ಮ ಪುರಾತನರ ಮನೆಯಲ್ಲಿ.

(೬ಥೆ. ೧೭೨)

೨೦೩

ಕಂದಿದೆನಯ್ಯ ಎನ್ನ ನೋಡುವರಿಲ್ಲದೆ;
ಕುಂದಿದೆನಯ್ಯ ಎನ್ನ ನುಡಿಸುವರಿಲ್ಲದೆ;
ಬಡವಾದೆನಯ್ಯ ಎನ್ನ ಬೇಡುವರಿಲ್ಲದೆ;
ಕಾಡಿ ಬೇಡುವ ಶರಣರ ತಂದು,
ಕಾಡಿ ಬೇಡಿಸು ಕೂಡಲಸಂಗಮದೇವಾ.

(೬ಥೆ ೧೯೫)

೨೦೪

ನಾನು ಭಕ್ತನಲ್ಲವಯ್ಯ! ನಾನು ವೇಷಧಾರಿಯಯ್ಯಾ.
ಕಾಟುಗ ಕೇತುಗ ಪೋಲುಗನೆಂಬುದು ಎನ್ನ ಹೆಸರು.
ಕೂಡಲಸಂಗಮದೇವಾ,
ನಿಮ್ಮ ಶರಣರ ಮನೆಯ ಮಗ ನಾನಯ್ಯ

(೬ಥೆ ೧೯೫)

೨೦೫

ಕಳಹೋದಡೆ ಕನ್ನದುಳಿಯ ಹಿಡಿವೆ.
ಬಂದಿವಿಡಿದೊಡೆ ನಿಮ್ಮಿಂದ ಮುಂದೆ ನಡೆವೆ;
ಮನ ಭೀತಿ ಮನ ಶಂಕೆಗೊಂಡೆನಾದೊಡೆ
ನಿಮ್ಮಾಣೆ ನಿಮ್ಮ ಪ್ರಮಥರಾಣೆ!
ಆಳ್ದನ ನಡೆ ಸದಾಚಾರವೆನ್ನದಿರ್ದಡೆ
ಕಟ್ಟಾಳು ಶಿಷ್ಯತನಕ್ಕೆ ಹೋಹ
ಕಷ್ಟವ ನೋಡಾ ಕೂಡಲಸಂಗಮದೇವಾ.

(೬ಥೆ. ೧೯೭)

೨೦೬

ಸ್ಫಟಿಕ ಪ್ರಜ್ವಲಜ್ಯೋತಿ ಘಟದೊಳಗೆ ತೋರುತ್ತಿರಲು
ದಿಟಪುಟವನತಿಗಳೆದು ಸಟೆಯು ಬಳಸುವರೆ ಅಜಗಣ್ಣ ?
ಅಂತರಂಗದ ಶುದ್ಧಿಯು ಬಹಿರಂಗಕ್ಕೆ ತಂದು
ಸಂತೈಸಲರಿಯದೆ ಮರುಳಂತಾದಿರಣ್ಣಾ!
ಜಂತ್ರದ ಕೀಲ ಕೊಟವು, ಸಂಚಲದ ಭೇದವು ತಪ್ಪಿ
ಮಂತ್ರ ಮುಗ್ಧವಾಗಿ ನುಡಿವರೆ ಅಜಗಣ್ಣಾ ?

(ಕಥೆ. ೨೨೪)

## ಭಾಗ–೨

೨೦೭

ಸುಖದುಃಖ ಭೋಗಾದಿ ಭೋಗಂಗಳೆಲ್ಲವು
ಗುರುಮಾಡುವ ಕಾರಣ ತನ್ನ ಬೆಂಬಳಿಯು ಮಾಯೆ;
ಅವ ಹಿಂಗಿ ತನ್ನ ತಾನರಿದಲ್ಲಿ
ಚನ್ನಬಸವಣ್ಣಪ್ರಿಯ ಚಂದೇಶ್ವರಲಿಂಗವ ಕಾಣಬಂಗಿತ್ತು.

(ಕಥೆ. ೨೩೮)

೨೦೮

ಬೇರ ಬಲ್ಲವಂಗೆ ಎಲೆಯು ತೋರುವರೆ.
ಜಂಗಮ ಬೇರೆ ನೀ ಬೇರೆ ಹೋಗಯ್ಯಾ.
ಚರಲಿಂಗವು ಪೂಜಿಸಿದಂತೆ ಪೂಜೆಗೊಂಡಿಪ್ಪರು;
ನೀ ಹೊತ್ತಿಗೊಂದು ರೂಪಾಗಿ ಭಕ್ತರ ಕಂದಿಕುಂದಿಸುವೆ;
ಕಚ್ಚುಟ ಕರ್ಪರಕ್ಕಾಗಿ ಸತಿಸುತರ ಬೇಡಿ ಕಾಡಿ
ಕನ್ನವಿಕ್ಕಿದೆ, ಕರುಗಾದೆ, ನಿನ್ನ ಹಂಗೇನು ಹೋಗು.
ಕೋಪದಲ್ಲಿ ನೀ ತೊಟ್ಟ ಬಹುರೂಪು ಸಹವಾಗಿ
ಇತ್ತಲೇಕೆ ಬಂದೆ ? ಭಕ್ತರು ನೋಡರು.
ಬೇಡಿದವರಿಗೆ ವರವ ಕೊಡು,ಬೆಳ್ಳಿಯ ಬೆಟ್ಟಕ್ಕೆ ಪೋಗು ಸುಖಿಯಾಗು
ನಮ್ಮ ಕಾಮಧೂಮಧೂಳೇಶ್ವರನ ಕರುಣವ ಪಡೆದು
ನೀನೆ ಸುಖಿಯಾಗು.

(ಕಥೆ. ೨೫೭)

೨೦೯

ಅಗಲಿದ ನಲ್ಲನ ಕನಸಿನಲ್ಲಿ ಕಂಡು ಸುಳಿಯದಿರವ್ವಾ!
ಕಂಡ ಕನಸು ದಿಟವಾದರೆ ಅವ ನಮ್ಮ ನಲ್ಲ;
ಮನಸುಳ್ಳವರು ನೀವು ಪುಣ್ಯಗೆಯ್ದಿರವ್ವಾ!
ಮಹಾಲಿಂಗಗಜೇಶ್ವರನು ಅಗಲಿದರೆ
ನಿದ್ರೆ ನಮಗಿಲ್ಲ; ಕನಸಿನಲ್ಲಿಂದ ಬಹುದವ್ವಾ.

(ಕಥೆ. ೩೧೮)

೨೧೦

ಆಸೆಯೆಂಬುದು ಅರಸಿಂಗೆ
ರೋಷವೆಂಬುದು ಯಮದೂತರಿಗೆ
ಈಶನ ಭಕ್ತರ್ಗೆ ಆಶೆ-ರೋಷ ಸಲ್ಲದು
ಈಸಕ್ಕಿಯಾಸೆ ನಿಮಗೇತಕ್ಕೆ ?
ಮಾರಯ್ಯಪ್ರಿಯ ಅಮರೇಶ್ವರಲಿಂಗಕ್ಕೆ ಸಲ್ಲದ ನೇಮ.

(ಕಥೆ. ೩೪೯(

೨೧೧

ಕೇಳಿರೆ ಕೇಳಿರೆ ಹಿರಿಯರು ಗುರುವಿನುಪದೇಶವನು.
ಒಂದು ಗೀಜಗನ ಉಪದೇಶದಿಂದ ಪೌಲಸ್ತ್ಯನು ಅಂದು
ಪಡೆಯನೆ ದಶಮುಖನ ಶಿರವ ಪರಿದಿಕ್ಕಿ ಪರಮನಿರ್ದೆಡೆಯ ?
ಕಾಣದೆ ಇಳೆಯಲ್ಲಿ. ಕರುಳ ತಂತಿಯ
ಉಪದೇಶದಿಂದ ಅಸುರನಂದು ಪಡೆಯನೆ ಸುರಪದವ!
ತರುಣೆ ಹರುಣೆಯು ಉಪದೇಶದಿಂದ
ಗತಿಮುಕ್ತಿಯ ಪದವ ಪಡದು ಬಟ್ಟೆಯ ಹತ್ತನೆ ವಿನಾಶಕ್ತಿರಾಯನು ?
ರಂಭೆಯ ಉಪದೇಶದಿಂದ ಶಂಭುವಿನೋಲಗದಲಿ
ಕುಳ್ಳಿರನೆ ಶ್ವೇತನು! ನಮ್ಮ ಕೂಡಲಸಂಗನ ಶರಣರ
ಉಪದೇಶವ ಕೇಳಿದವರಿಗೆ ದುರಿತ ಕರ್ಮಂಗಳು
ಬಿಟ್ಟು ಪೋಗಿ ಮನನಿರುತವಾಗಿಪ್ಪರು ಲಿಂಗದಲ್ಲಿ.

(ಕಥೆ. ೩೮೪)

೨೧೨

ಆದಂತೆ ಆಗಲಿ, ಮಾದಂತೆ ಮಾಗಲಿ ಎನಲಾಗದು.
ನೇಮದಾಃತಂಗೆ ಛಲ ಬೇಕು ಛಲಬೇಕು.
ಹಿಡಿದುದ ಬಿಡಲಾಗದಯ್ಯ.
ಹುಲಿಗೆರೆಯ ವರದಸೋಮನಾಥ
ಮನಮುಟ್ಟಿದ ಧೀರಂಗಲ್ಲದೆ ಸೋಲುವವಲ್ಲ.

(ಕಥೆ. ೩೯೧)

೨೧೩

ಆವನಾದಡೇನು ಹೇಮವಿಲ್ಲದೆ ಅಂಗಮಿಸಬಹುದೆ ?
ಕೊಡಲಿಲ್ಲವೆಂಬುದರಿಂದ ಸಾಯಲುಬಹುದು; ಸೈರಿಸಬಾರದು.
ಬೇಡುವರ ನೋಡಿ ಈಯಲಿಲ್ಲದ ಜೀವನವೇಕೆ,
ಕೂಡಲಸಂಗಮದೇವಾ ?

(ಕಥೆ. ೪೦೯)

೨೧೪

ದಯದಿಂದ ಬಿಟ್ಟು ಧರ್ಮವಾವುದಯ್ಯಾ ?
ದಯವೆ ಬೇಕು ಸಕಲ ಪ್ರಾಣಿಗಳಲ್ಲಿಯು
ದಯವೆ ಧರ್ಮದ ಮೂಲವಯ್ಯಾ.
ಕೂಡಲಸಂಗಯ್ಯನಂತಲ್ಲದೇ ಒಲ್ಲನಯ್ಯಾ.

(ಕಥೆ, ೪೨೦)

೨೧೫

ಡೋಹಾರನೆಂಬೆನೆ ಕಕ್ಕಯ್ಯನ ?
ಮಾದಾರನೆಂಬೆನೆ ಚೆನ್ನಯ್ಯನ ?
ಮಡಿವಾಳನೆಂಬೆನೆ ಮಾಚಯ್ಯನ ?
ಸೆಟ್ಟಿಯೆಂಬೆನೆ ಸಿರಿಯಾಳನ ?
ನಾನು ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ
ಕಷ್ಟದ ನುಡಿಯ ಕೇಳಿಸದಿರು, ಕೂಡಲಸಂಗಮದೇವಾ.

(ಕಥೆ. ೪೨೯)

೨೧೬

ಮಳಲಲ್ಲಿ ರಸವುಂಟೆ ? ನೆಳಲಿಗೆ ತಡೆಯುಂಟೆ ?
ರಣದಲ್ಲಿ ತಪವುಂಟೆ ? ನೇಹತಪ್ಪಿದಲ್ಲಿ ಮೋಹವನರಸಲುಂಟೆ ?
ಮಹಾಲಿಂಗ ಚನ್ನರಾಮನ ಮನ ಮುರಿದ ಬಳಿಕ
ಕಂಗಳಿಗೆ ವಿಷವಯ್ಯಾ.

(ಕಥೆ. ೪೬೩)

೨೧೭

ಕಾಯವೆರಸಿ ಕೈಲಾಸಕ್ಕೆ ಪೋಗುವ
ಭಿನ್ನಪದರ ಮಿಂಡ.
ಸತ್ತು ಹೂಳಿಸಿಕೊಂಬ ಅದ್ವೈತರ ಗಂಡ.
ಮಲತ್ರಯವ ತೊಳೆದ ಶರಣರ ತೊಂಡ
ಚಿಕ್ಕಯ್ಯಪ್ರಿಯ ಸಿದ್ಧಲಿಂಗ ನೀನು ಇಲ್ಲ ಇಲ್ಲ.

(ಕಥೆ. ೪೬೪)

೨೧೮

ಎಮ್ಮವರೆ ಅಧಿಕರು; ಎಮ್ಮವರೆ ಅಧಿಕರು;
ಎಮ್ಮವರೆ ಎಲ್ಲರಿಂದಧಿಕರು ನೋಡಯ್ಯ.
ಪಾಕವ ಮಾಡುವ ಭಾಂಡ
ಸೊಣಗನ ಡೋವಿಗೆಯಯ್ಯ
ಕೆರಹಿನಲ್ಲಿ ಮುಚ್ಚುವದಾಚಾರವಯ್ಯ.
ಕೂಡಲಸಂಗನ ವಚನ ಇಂತೆಂದುದು.

(ಕಥೆ. ೫೦೬)

## ಮಹಾದೇವಿಯಕ್ಕನ ಸಾಂಗತ್ಯ

(ಸಂ. ೪ ಪ್ರಾರಂಭದಲ್ಲಿ)

೨೧೯

ಕಂಗಳ ಕಳೆದು. ಕರುಳುಗಳ ಕಿತ್ತು,
ಕಾಮದ ಮೂಗ ಕೊಯ್ದು,
ಭಂಗದ ಬಟ್ಟೆಯ ಭವಗೊಲಿದವಳಿಗಂಗವೆಲ್ಲಿಯದು ಹೇಳಾ!
ಶೃಂಗಾರವೆಂಬ ಹಂಚಿಗೆ ಹಲ್ಲ ತೆರೆದರೇನುಂಟು ?
ಲಿಂಗವೇ ಅಂಗವಾಹ ಪರಿಯನೆನಗೆ ಹೇಳಾ
ಶ್ರೀಗಿರಿ ಚನ್ನಮಲ್ಲಿಕಾರ್ಜುನ !

೨೨೦

ಮೊಲೆ ಮುಡಿಯಿದ್ದರೇನು, ಮೂಗಿಲ್ಲದವಳಿಂಗೆ ?
ತಲೆಯ ಮೇಲೆ ಸೆರಗೇತಕ್ಕೆ
ಸಹಜ ಸಂಕಲ್ಪವಿಲ್ಲದವಳಿಂಗೆ ?
ಜಲದೊಳಗೆ ಹುಟ್ಟಿದ ಗುಳ್ಳೆ
ಜಾತಿಸ್ಮರತ್ವವರಿದಿತ್ತು!
ಹಲಬರ ಹಾದಿಯೊಳು ಹರಿಸುರರು
ನಿಮ್ಮ ನೆಲೆಯಂ ತೋರಿದೆ
ಶ್ರೀಗಿರಿ ಚನ್ನಮಲ್ಲಿಕಾರ್ಜುನ!

೨೨೧

ಕಾಮನ ತಲೆಯ ಕೊರೆದು ಕಾಲಿನ ಕಣ್ಣ ಕಳೆದು
ಸೋಮಸೂರ್ಯರ ಹುರಿದು ಹುಡಿಮಾಡಿ ತಿಂಬವಳಿಂಗೆ
ನಾಮವನಿಡಬಲ್ಲವರಾರು ಹೇಳಿರೆ!
ನೀ ಮದವಳಿಗನಾಗಿ, ನಾ ಮದವಳಿಗಿತ್ತಿಯಾಗಿ
ಯಮುನ ಕೂಡುವ ಮರುತನಂತೆ ನೋಡಾ,
ಶ್ರೀಗಿರಿ ಚನ್ನಮಲ್ಲಿಕಾರ್ಜುನ!

೨೨೨

(ಸಂ. ೬ ಪ್ರಾರಂಭದಲ್ಲಿ)

ಬಸವನ ಭಕ್ತಿ ಕೊಟ್ಟಣದ ಮನೆ!
ಸಿರಿಯಾಳನ ಭಕ್ತಿ ಕಸಬಗೇರಿ!
ಸಿಂಧುಬಲ್ಲಾಳನ ಭಕ್ತಿ ಪರದಾರ ದ್ರೋಹ!
ಉಳಿದಾದಟಮಟ ಉದಾಸೀನ ದಾಸೋಹವ
ಮಾಡುವವರ ದ್ರವ್ಯವೆಂಬ ಭೂತ ಸೋಂಕಿತು.
ಮಣ್ಣಿನ ಮನೆಯ ಕಟ್ಟಿ
ಮಾಯಾಮೋಹಿನಿಯೆಂಬ ಮಹೇಂದ್ರಜಾಲದೊಳಗಾಗಿ
ಮಾಡುವ ಮಾಟ
ಭಕ್ತನಲ್ಲಿ ಉಂಡು ಉದ್ದಂಡ ವೃತ್ತಿಯಲ್ಲಿ
ನಡೆವವರು ಶಿವನಲ್ಲ.
ಇವರು ದೇವಲೋಕ ಮರ್ತ್ಯಲೋಕಕ್ಕೆ ಹೊರಗು!
ಶ್ರೀಗಿರಿ ಚೆನ್ನಮಲ್ಲಿಕಾರ್ಜುನ,
ನನ್ನ ಭಕ್ತಿ ನಿನ್ನೊಳಗೈಕ್ಯವಾಯಿತಾಗಿ
ನಿರ್ವಯಲಾದೆ ಕಾಣಾ!

೨೨೩

ಅನ್ನವ ನೀಡುವವರಿಗೆ ಧಾನ್ಯವೆ ಶಿವಲೋಕ!
ಅರ್ಥವ ಕೊಡುವವರಿಗೆ ಪಾಷಾಣವೆ ಶಿವಲೋಕ!
ಹೆಣ್ಣು–ಹೊನ್ನು–ಮಣ್ಣು ಮೂರನೂ
ಕಣ್ಣಲಿ ನೋಡಿ, ಕಿವಿಯಲಿ ಕೇಳಿ
ಕೈಯಲಿ ಮುಟ್ಟಿ ಮಾಡುವ ಭಕ್ತಿ
ಸಣ್ಣವರ ಸಮಾರಾಧನೆಯಾಯಿತು!
ತನ್ನನಿತ್ತು ತುಷ್ಟಿವಡೆವರನೆನಗೊಮ್ಮೆ ತೋರಾ,
ಶ್ರೀಗಿರಿ ಚೆನ್ನಮಲ್ಲಿಕಾರ್ಜುನ!

೨೨೪

ಸುವಾಸನ ಸೂಕ್ಷ್ಮ ಗಂಧ ಕರ್ಪೂರಗೌರಂಗೆ
ಪುಷ್ಪದ ಹಂಗೇತಕ್ಕೆ ?
ಮಾಟದಲಿ ಮನ ನಂಬುಗೆಯಿಲ್ಲದ,

ಅಹಂಕಾರಕ್ಕೀಡಾದ, ಭಕ್ತಿಯೆಂಬ ಪಸಾರವನಿಕ್ಕಿ,
ಹೊಲೆಹದಿನೆಂಟು ಜನ್ಮವ ಹೊರೆವುದರಿಂದ
ಅಂಗೈಯಲೊರಸಿ ಮುಕ್ತಿಯ ಮೂಲ
ಶಿಖಿರಂಧ್ರದ ಕಾಮನ ಸುಟ್ಟು
ಶುದ್ಧಸ್ಫಟಿಕ ಸ್ವಯಂಜ್ಯೋತಿಯನು
ಸುಷುಮ್ನಾನಾಳದಿಂದ ಹಂಕ್ಷಂ ಎಂಬ ಎರಡಕ್ಷರವ
ಸ್ವಯಾನುಭಾವ ಭಕ್ತಿನಿರ್ವಾಣವಾದವರನೆನಗೊಮ್ಮೆ
ತೋರಿರೆ ಶ್ರೀಗಿರಿ ಚೆನ್ನಮಲ್ಲಿಕಾರ್ಜುನ!

೨೨೫

ಮಾಟ ಮದುವೆಯ ಮನೆ
ದಾನ ಧರ್ಮ ಸಂತೆಯ ಪಸಾರ!
ಸಾಜ ಸಾಜೇಶ್ವರಿ ಸೂಳಿಗೇರಿಯ ಸೊಬಗು!
ವ್ರತ ನೇಮವೆಂಬುದು ವಂಚನೆಯ ಲುಬ್ಧವಾಣಿ!
ಭಕ್ತಿಯೆಂಬುದು ಬಾಜಿಗಾರರಾಟ!
ಬಸವಣ್ಣಂಗೆ ತರ ನಾನರಿಯದೆ ಹುಟ್ಟಿದೆ
ಹುಟ್ಟಿ ಹಸಿಗೀಡಾದೆ!
ಹಸಿ ವಿಷಯದೊಳಗಡಗಿತ್ತು!
ವಿಷಯ ಮಸಿಮಣ್ಣಾಯಿತ್ತು!
ನಿನ್ನ ಗಸಣೆಯನೊಲ್ಲೆ
ಹೋಗಾ ಶ್ರೀಗಿರಿ ಚೆನ್ನಮಲ್ಲಿಕಾರ್ಜುನ!

# ಬೊಮ್ಮಲಿಂಗನ ಕಾವ್ಯ

---

೨೨೬

ತನ್ನ ಹಿತ್ತಲೊಳು ಮರುಜೇವಣಿಗಿದ್ದು
ನಾರುಬೇರುಗಳಿಗೆ ಹರಿವ ಮನುಜರಿಗೆ ನಾನೆಂತೆಂಬೆನಯ್ಯಾ ?
ತನ್ನೊಳಗೆ ಶಿವಲಿಂಗವಿದ್ದು
ಅನ್ಯದೈವಕ್ಕೆರಗುವ ಕುನ್ನಿ ಮನುಜರಿಗೆ ನಾನೆಂತೆಂಬೆನಯ್ಯಾ ?
ತ್ರೈಲೋಚನ ಮನೋಹರ ಮಾಣಿಕೇಶ್ವರಲಿಂಗ,
ಪಾಪಿಯ ಕಣ್ಣಿಗೆ ಪರುಷ ಕಲ್ಲಾದಂತೆ ಅಯ್ಯಾ, ನೀನು.

(ಸಂ. ೧, ಪ. ೯೯ರ ನಂತರ.)

೨೨೭

ನಿಂದೆ ಸ್ತುತಿಗಳಿಗೆ ಕಿವುಡನಾಗಿರಬೇಕು.
ಪರನಾರಿದ್ರವ್ಯಕ್ಕೆ ಅಂಧಕನಾಗಿರಬೇಕು.
ಶಬ್ದಸಂಭ್ರಮದ ತಾರ್ಕಿಕರೊಡನೆ
ಮಾಗಿಯ ಕೋಗಿಲೆಯಂತೆ ಮೂಗನಾಗಿರಬೇಕು.
ಇವನಳಿದ ಶರಣರ ಹೃತ್ಕಮಲ ದೊಳಗೆ ತಾನು ತಾನಾಗಿಹ
ತ್ರೈಲೋಚನ ಮನೋಹರ ಮಾಣಿಕೇಶ್ವರಲಿಂಗನು.

(ಸಂ. ೨, ಪ. ೨೭ರ. ನಂತರ)

೨೨೮

ಜ್ಞಾನದ ಒರಳಿಗೆ ಏಕೋಭಾವದ ಒನಕೆಯನೆ ಕೊಂಡು
ಇಮ್ಮನವಾದುದನು ಒಮ್ಮನವಾಗಿ ಥಳಿಸಿ,
ಅಗ್ನಿಯಿಲ್ಲದೆ ಪಾಕವಾಯಿತ್ತು.
ಎಸರಿಲ್ಲದೆ ಕುದಿದು, ನಿರಾಳ ಭಾಂಡೆಯಲ್ಲಿ
ಬೋನವಾಯಿತ್ತಯ್ಯಾ,
ತ್ರೈಲೋಚನ ಮನೋಹರ ಮಾಣಿಕೇಶ್ವರಲಿಂಗಕ್ಕೆ.

(ಸಂ. ೩, ಪ. ೬೩ರ ನಂತರ)

೨೨೯

ಅಗ್ನಿಯ ಪುತ್ಥಳಿಗೆ ಚೇಳೂರಿದಡೇನು. ?
ಬಾಲಬೆಂದು ಮುಳ್ಳುರಿದು ಮಿಡಮಿಡನೆ ಮಿಡುಕುತ್ತಿಹುದು.
ತ್ರೈಲೋಚನ ಮನೋಹರ ಮಾಣಿಕೇಶ್ವರಲಿಂಗ
ನಿಂದಕರ ಬಾಯಲಿ ಬಗದಳ ಮೂಡಲಿ.

(ಸಂ. ೪, ಪ. ೨೬ರ ನಂತರ)

೨೩೦

ಘಾತ್ರಗಳು ಸಕೀಲವಾಗದ ಮುನ್ನ ಪುಡಿಸಿ,
ದೃಷ್ಟಿ ನರನರಸದ ಮುನ್ನವೇ ನೋಡಿ,
ಮತಿ ಮರೆಯದ ಮುನ್ನ ಜಂಗಮಕ್ಕೆ ನೀಡಿ,
ತ್ರೈಲೋಚನ ಮನೋಹರ ಮಾಣಿಕೇಶ್ವರ
ಸಹವಾಗವನಿಟ್ಟರೆ ಮರಳಿಬಾಹುದೋ.

(ಸಂ. ೪, ಪ. ೩೬ರ ನಂತರ

೨೩೧

ಕೆರೆಯನಗಳುತ ಕೊರಕಲಕಡಿಯಲದೇಕೋ.
ತಾಳ್ಮರನೇರಿ ಬಿದ್ದವನ ಕೈಯಲಿ ಹೊಯ್ಯಲೇಕೋ.
ತನ್ನ ಕಿಚ್ಚಿನಲಿ ತಾನೆ ಬೇವವಗೆ
ಮರುಳನಿತಬಗಿಯಲೇತಕೋ ಮರುಳ ಮನುಜನೆ ?
ತ್ರೈಲೋಚನ ಮನೋಹರ ಮಾಣಿಕೇಶ್ವರ
ಹೆಣನಿರಿದು ಹಗೆಯಗೊಳಬೇಡ.

(ಸಂ. ೫, ಪ.೩೦ರ, ನಂತ

# ಜಂಗಮ ಚಾರಿತ್ರ

೨೩೨

ಉಲುಹಿಲ್ಲದ ಬ್ರಹ್ಮಾರಣ್ಯದೊಳಗೊಂದು
ಮಹಾಲಿಂಗ ಉದಯವಾಯಿತ್ತು ನೋಡಾ!
ಆ ಲಿಂಗವ ನೋಡಹೋದರೆ
ನೋಡುವ ಕಂಗಳು ತಾವೆ ಲಿಂಗವಾದವಯ್ಯಾ!
ಆ ಲಿಂಗವ ಹಸ್ತದಲ್ಲಿ ಮುಟ್ಟಿ ಪೂಜೆಯಮಾಡುವೆ ನೆಂದರೆ
ಆ ಹಸ್ತಗಳು ತಾವೆ ಲಿಂಗವಾದವಯ್ಯಾ!
ಆ ಲಿಂಗವ ಭಾವದಲ್ಲಿ ಭಾವಿಸಿಹೆನೆಂದರೆ,
ಆ ಭಾವವು ತಾ ಲಿಂಗವಾಯಿತ್ತು ನೋಡಾ!
ಇಂತಪ್ಪ ಮಹಾಲಿಂಗವನಪ್ಪಿ ತಾ ಮಹಾಲಿಂಗವಾದ ಬಳಿಕ
ಇಂತು ಅದಕೆ ಆವ ಚಿಂತೆ ಹೇಳಾ ಜಂಗಮಲಿಂಗಪ್ರಭುವೆ ?

(ಸಂ. ೨. ಪ್ರಾರಂಭದಲ್ಲಿ)

೨೩೩

ಅಟ್ಟಂಬಾರಣ್ಯದೊಳಗೊಂದು
ಕಟ್ಟಲಿಲ್ಲದ ದೇಗುಲವುಳಿದಿಪ್ಪುದು ನೋಡಿರಯ್ಯಾ!
ಆ ದೇಗುಲದೊಳಗೊಂದು ಶರ್ವಜೀವನೆಂಬ ರತ್ನ
ಆ ಬಿದ್ದಿಪ್ಪುದು ನೋಡಿರಯ್ಯಾ.!
ಆ ರತ್ನ ಮೂರುಲೋಕಕೆ
ವ್ಯೆ ದೋರದಿಪ್ಪುದು ನೋಡಿರಯ್ಯಾ!
ನೆಟ್ಟಕಲ್ಲಿನೊಳಗೊಬ್ಬ ಹುಟ್ಟುರುಡನುದ್ಭವಿಸಿಬಂದು
ಆ ಸರ್ವಜೀವನೆಂಬ ರತ್ನವ ಮುಟ್ಟಿ ನೋಡಿದರೆ,
ಆ ಹುಟ್ಟುಗುರುಡ ತಾನೆ ರತ್ನವಾದ!
ಅದ ಕಂಡು ನಾ ಬೆರಗಾದೆನಯ್ಯಾ ಜಂಗಮಲಿಂಗ ಪ್ರಭುವೆ.!

(ಸಂ. ೩, ಪ್ರಾರಂಭದಲ್ಲಿ)

೨೩೪

ಒಂದನ್ನೆಯ ದೆಸೆಯಲ್ಲಿ ಒಂದುಮುಖದ ಭೈರವನು.
ಎರಡನೆಯ ದೆಸೆಯಲ್ಲಿ ಎರಡುಮುಖದ ಭೈರವನು.
ಮೂರನೆಯ ದೆಸೆಯಲ್ಲಿ ಮೂರುಮುಖದ ಭೈರವನು.

ನಾಲ್ಕನೆಯ ದೆಸೆಯಲ್ಲಿ ನಾಲ್ಕುಮುಖದ ಭೈರವನು.
ಐದನೆಯ ದೆಸೆಯಲ್ಲಿ ಐದುಮುಖದ ಭೈರವನು.
ಆರನೆಯ ದೆಸೆಯಲ್ಲಿ ಆರುಮುಖದ ಭೈರವನು
ಏಳನೆಯ ದೆಸೆಯಲ್ಲಿ ಏಳುಮುಖದ ಭೈರವನು,
ಇಂತಿರುವ ಅಷ್ಟಭೈರವರು ಹೊರಸುತ್ತಿನಲ್ಲಿ ಪಪರಿಕರು.
ತುತ್ತರಸಿನಲೆಂಬ ಚಕ್ರವು ಸುರಗಿಯಂದದಿ ಸುತ್ತಿ
ತೆರಹು ಇಲ್ಲದೆ ತಿರುಗುತ್ತಿಹುದು.
ಅದು ಕಾ[೧]ಣಬಾರದಂತಿಹುದು ನೋಡಾ ಜಂಗಮಲಿಂಗ ಪ್ರಭುವೆ.

(ಸಂ. ೩, ಪ. ೧೭ರ ನಂತರ)

೨೩೫

ಓಂ ನಮಃ ಶಿವಾಯುವೆಂಬ ಮೂಲಮಂತ್ರದಿಂದ
ಗಿರಿಜೆ ಪಾದೋದಕವ ಮಾಡಿಕೊಂಡು ಬಂದು
ನಿಂದು ಗೊಡ್ಡಿನ ಮೇಲೆ ತಳಿದಳು.
ತಳಿಯಲು ಗೊಡ್ಡುಗಳು ಕಾಮಧೇನುಗಳಾಗಿ ಕರೆಯಲು
ಆ ಕಾಮಧೇನುಗಳು ಕರದ ಕಾರಣದಿಂದ
ಅಲ್ಲಿ ಕ್ಷೀರ ಸಮುದ್ರವು ಹುಟ್ಟಿತು ನೋಡಾ ಜಂಗಮಲಿಂಗ ಪ್ರಭುವೆ!

(ಸಂ. ೪. ಪ.೬೭ ರ ನಂತರ)

೨೩೬

ಓಂ ನಮಃಶಿವಾಯು ಎಂಬ ಮೂಲಮಂತ್ರದಿಂದ
ಗಿರಿಜೆಯು ಬಂದು ಪಾದಾಮೃತವ ಪಡೆದಳು.
ಆ ಪಾದಾಮೃತದಿಂದ ಕ್ಷೀರಸಮುದ್ರ, ಶಿಲಾನದಿ, ಅಮೃತನದಿ
ಇಂತೀ ಮೂರುನದಿ ಹುಟ್ಟಿದವು ನೋಡಾ ಜಂಗಮಲಿಂಗ ಪ್ರಭುವೆ.

(ಸಂ. ೪, ಪ. ೭೮ರ ನಂತರ)

೨೩೭

[೧]ನಮ್ಮ ಶಿವನ ಮಸ್ತಕದಲ್ಲಿ ಓಂಕಾರಗುಹೇಶ್ವರ ಲಿಂಗವಿತ್ತು.
ನಮ್ಮ ಶಿವನ ಶ್ರೋತ್ರದಲ್ಲಿ ಪ್ರಸಾದಲಿಂಗವಿತ್ತು.

---

೧ + ರ (ಮೂಲ)

ನಮ್ಮ ಶಿವನ ನೇತ್ರದಲ್ಲಿ ಶಿವಲಿಂಗವಿತ್ತು.
ನಮ್ಮ ಶಿವನ ನಾಸಿಕದಲ್ಲಿ ಆಚಾರ ಲಿಂಗವಿತ್ತು.
ನಮ್ಮ ಶಿವನ ಜಿಹ್ವೆಯಲ್ಲಿ ಗುರುಲಿಂಗವಿತ್ತು
ನಮ್ಮ ಶಿವನ ತ್ವಕ್ಕಿನಲ್ಲಿ ಜಂಗಮಲಿಂಗ[೧]ವಿತ್ತು.
ನಮ್ಮ ಶಿವನ ಹೃದಯದಲ್ಲಿ ಮಹಾಲಿಂಗವಿತ್ತು.
ನಮ್ಮ ಶಿವನ ಪಾದದ ಗುಲ್ಫದಲ್ಲಿ ಭೂಪ್ರದಕ್ಷಿಣ ಲಿಂಗವಿತ್ತು.
ನಮ್ಮ ಶಿವನ ಪಾದದಂಗುಷ್ಟದಲ್ಲಿ ಸರ್ವದಯಾಳು ಲಿಂಗವಿತ್ತು
ಇಂತೀ ಸರ್ವಲಿಂಗಾಂಗಿ ನಮ್ಮ ಶಿವನು ಬಂದು,
ಈ ಭೂಮಿಯ ಮೇಲೆ ತನ್ನ ಪಾದವನಿಕ್ಕಿ ನಿಲ್ಲಲು
ಅಂದೇ ಈ ಭೂಮಿಗೆ ಲಿಂಗಧಾರಣವಾಯಿತ್ತ[೨] ನೋಡಾ
ಜಂಗಮಲಿಂಗ ಪ್ರಭುವೆ.

(ಸ. ಶಿ. ಪ್ರಾರಂಭದಲ್ಲಿ)

೨೩೮

ಹಾಡಿಹರಸಿ ಉಂಬ ಜಂಗಮವೆಲ್ಲ ಬ್ರಹ್ಮನ ಸಂತತಿ.
ಕಾಡಿಬೇಡಿ ಉಂಬ ಜಂಗಮವೆಲ್ಲ ವಿಷ್ಣುವಿನ ಸಂತತಿ.
ಹಗಲಲಿ ಹೊಕ್ಕು ಉಂಬ ಜಂಗಮವೆಲ್ಲ ರುದ್ರನಸಂತತಿ.
ಕಾಡಿ ಬೇಡದೆ ಹೊಗುವರೆ ಹೊಗದೆ,
ಅನ್ಯಭಾವದಿಂದ ಬಂದ ಭಿಕ್ಷವನು[ಸ್ವೀಕರಿಸ] ಬಲ್ಲರೆ
ಆತನೆ ಪರಮ ವಿರಕ್ತ ನೋಡಾ, ಜಂಗಮಲಿಂಗ ಪ್ರಭುವೆ.

(ಸಂ. ಶಿ. ಪ್ರಾರಂಭದಲ್ಲಿ)

---

೧+ ಮತ್ತೆ ೧+ ಮೆಬಲಿಂಗ (ಮೂಲ)
೨+ ಕೇಳು ಗಿರಿಜೆಯೆಂದು ಈಶ್ವರನು ಹೇಳಿದನು. (ಮೂ)

೨೩೯

ಎರಡೆಂಬತ್ತುಕೋಟಿ ಗೀತವನು ಹಾಡಿದರೇನಯ್ಯಾ ?
ಬೆಟ್ಟಕ್ಕೆ ನಾಯಿ ಬೊಗಳಿದಂತಾಯಿತಯ್ಯಾ.
ಮನವು ಘನವ ನೆಮ್ಮದು ಘನವು ಮನವ ನೆಮ್ಮದು.
ಹಾಡಿದರೇನು ಓದಿದರೇನು ಗುಹೇಶ್ವರ ನೀನೊಲಿದ ಕಾಲಕ್ಕೆ
ಎರಡೆಂಬತ್ತುಕೋಟಿ ಗೀತವೆಲ್ಲವೂ
ನಿಮ್ಮದೊಂದು ಮಾತಿನೊಳಡಕವಯ್ಯಾ.

(ಸಂ. ೩, ಪ. ೭೯ರ ನಂತರ)

೨೪೦

ಪರವೆಂಬುದೆ ಆದ್ಯಂತ ಶೂನ್ಯವು;
ಅದರಿಂದ ಮಹಾಸಾದಾಖ್ಯವೆಂಬ ನಾದವು ಜನಿಸಿತ್ತು
ಅದರಿಂದ ಶಾಂತ್ಯತೀತೋತ್ತರೆಯೆಂಬ ಕಳೆಯಾಯಿತ್ತು.
ಈ ಕಳೆಯು ಆ ನಾದವು
ಚಿಚ್ಛಕ್ತಿಯೆಂಬ ಬಿಂದುವಿನಲ್ಲಿ ಕೂಡಲು
ಮಹಾಲಿಂಗವು ಉದಯವಾಯಿತ್ತು.
ಶಿವಸಾದಾಖ್ಯವೆಂಬ ನಾದವು ಶಾಂತ್ಯತೀತೆಯೆಂಬ ಕಳೆಯು
ಪರಶಕ್ತಿಯೆಂಬ ಬಿಂದುವಿನಲ್ಲಿ ಕೂಡಲು ಪ್ರಸಾದಲಿಂಗೋದ್ಭವ.
ಅಮೂರ್ತ ಸಾದಾಖ್ಯವೆಂಬ ನಾದವು ಶಾಂತಿಯೆಂಬ ಕಳೆಯು
ಅನಾದಿಯೆಂಬ ಬಿಂದುವಿನಲ್ಲಿ ಕೂಡಲು ಚರಲಿಂಗೋದ್ಭವ.
ಮೂರ್ತಿಸಾದಾಖ್ಯವೆಂಬ ನಾದವು ವಿದ್ಯೆಯೆಂಬ ಕಳೆಯು
ಇಚ್ಛಾಶಕ್ತಿಯೆಂಬ ಬಿಂದುವಿನಲ್ಲಿ ಕೂಡಲು ಶಿವಲಿಂಗೋದ್ಭವ.
ಕರ್ತೃಸಾದಾಖ್ಯವೆಂಬ ನಾದವು ಪ್ರತಿಷ್ಠೆಯೆಂಬ ಕಳೆಯು
ಜ್ಞಾನಶಕ್ತಿಯೆಂಬ ಬಿಂದುವಿನಲ್ಲಿ ಕೂಡಲು ಗುರುಲಿಂಗೋದ್ಭವ.
ಕರ್ಮಸಾದಾಖ್ಯವೆಂಬ ನಾದವು ನಿವೃತ್ತಿಯೆಂಬ ಕಳೆಯು
ಕ್ರಿಯಾಶಕ್ತಿಯೆಂಬ ಬಿಂದುವಿನಲ್ಲಿ ಕೂಡಲು ಆಚಾರಲಿಂಗೋದ್ಭವ.
ಇಂತೀ ಷಡ್‌ಬ್ರಹ್ಮತತ್ವಂಗಳ ಹಸುಗೆಯನರಿದು,
ಷಟ್‌ಸ್ಥಲ ಕ್ರಿಯಾಮಿಶ್ರಣಂಗಳನರಿದು ಆಚರಿಸುವಾತನೆ
ಷಟ್‌ಸ್ಥಲಬ್ರಹ್ಮಿಯೆಂಬೆ ಕಾಣಾ ಕೂಡಲಚೆನ್ನಸಂಗಮದೇವಾ.

(ಸಂ. ೫, ಪ. ೧೩೪ರ ನಂತರ)

೨೪೧

ಲಿಂಗದೊಳುದಯಿಸಿ ಅಂಗವಿಡಿದಿರ್ಪವರ
ಇಂಗಿತವ ಬೆಸಗೊಂಬರಯ್ಯಾ.
ಅವರ ನಡೆಯೆ ಆಗಮ, ಅವರ ನುಡಿಯೆ ಪರಮಾಮೃತ.
ಅವರ ಲೋಕದ ಮಾನವರೆಂದೆನ್ನಬಹುದೆ ಅಯ್ಯಾ ?
ಅದೆಂತೆಂದಡೆ:
“ವೃಕ್ಷಾದ್ಭವಂತಿ ಬೀಜಾನಿ ತದ್ವೃಕ್ಷೇ ಲೀಯತೇ ಪುನಃ।
ರುದ್ರಲೋಕಂ ಪರಿತ್ಯಕ್ತ್ವಾ ಶಿವಲೋಕೇ ಭವಿಷ್ಯತಿ॥”
ಎಂಬುದಾಗಿ,
ಅಂಕೋಲೆಯ ಬೀಜ ಮರಳಿ ತರುವನಪ್ಪಿದಂತೆ
ಅಪ್ಪಿದರು ಕೂಡಲಚೆನ್ನಸಂಗಾ ನಿಮ್ಮ ಶರಣರು.

(ಸಂ. ೫, ಪ. ೮೭ರ ನಂತರ)



# ಕುಸ್ತಿ ಆಗಮ

೨೪೨

ನಾನಿಲ್ಲದ ಮುನ್ನ ನೀನಾದೆಯಯ್ಯಾ.
[ನೀನಿರ್ದೆಯಾಗಿ] ಆನು ಇರ್ದೆನಯ್ಯಾ.
ಎನ್ನ ಕೈಯಲ್ಲಿ ನಿನ್ನ ಕೊಟ್ಟರಲ್ಲದೆ,
[ನಿನ್ನ] ಕೈಯಲ್ಲಿ ಎನ್ನ ಕೊಟ್ಟರೆ ಹೇಳಾ ?
ಎನಗೆ ನೀನು ಗುರುವೆ ? ನಿನಗಾನು ಶಿಷ್ಯನೆ ?
ಎನ್ನ ಕರಸ್ಥಲಕೆ ನೀನು ಬಂದೆಯಲ್ಲದೆ
ನಿನ್ನ ಕರಸ್ಥಲಕ್ಕೆ ನಾನು ಬಂದೆನೆ ?
ಕ್ರಿಯದ ಕರ್ಮದ ಕಷ್ಟವೆನಗೆ.
ನಿಃಕ್ರಿಯದ ಸುಖ ನಿನಗೆ.
ವ್ರತನೇಮ ಶೀಲಸಂಬಂಧವೆನಗೆ.
ವ್ರತನೇಮವಿಲ್ಲದಂಥದು ನಿನಗೆ.
ಭಕ್ತಿಯ ಮಾಡುವ ಕುಸ್ತಿ ಸಾಧನೆಯು ಎನಗೆ.
[ವಿ]ರಕ್ತಿ ಸಾಧನೆ, ಮುಕ್ತಿ ನಿನಗೆ.
ಅಷ್ಟತನುವಿಧಾರ್ಚನೆ ಎನಗೆ.
ಅಷ್ಟದಳದ ಮಂಟಪದ ಮಧ್ಯದ ಸುಖ ನಿನಗೆ.
ಅಷ್ಟಾಂಗಯೋಗದ ಕಷ್ಟದ ದುಃಖ ಎನಗೆ.
ನಿಷ್ಠೆ ನಿರಾಲಂಬವು ನಿನಗೆ.
ಷಡೂರ್ಮೆಯೊಳು ಬಿದ್ದು ಮುಳುಗುವ ದುಃಖ ಎನಗೆ.
ಷಡುಸ್ಥಲದ ಲಿಂಗಾಂಗದನುಭಾವದ ಸುಖ ನಿನಗೆ.
ಎಂಬತ್ತುನಾಲ್ಕುಲಕ್ಷದ [¹ಭವವ²] ನೋಡುವ ಕಂಗಳು ಎನಗೆ.
ಅಂಗಾಂಗಗೊಂಡು ಅಂಬರಾತ್ಮಕನಾಗಿರುವ
ಮೂರ್ತಿಯ ನೋಡುವ ಕಂಗಳು ನಿನಗೆ.
ಇಂತೀ ಸರ್ವಸುಖದನುಭಾವ ನಿನಗೆ.
ಸರ್ವದುಃಖ ಬಂಧನದ ಚಿಂತಿ ಎನಗೆ.
ಸುಖವೆ ನಿನಗೆ; ದುಃಖವೆ ಎನಗೆ.

---

೧-೨ ಭಾಷೆಯಲ್ಲಿ (ಮೂಲ)

ಇಂತೀ ನಾನು ನೀನೆಂಬ ಉಭಯವೆನಗೆ.
ಏಕವಾದ ಪ್ರಭೆಯೊಳು ಎರಡುಮಾಡಿ ತೋರುವ
ಲಿಂಗದ್ರೋಹ ನಿನ್ನದೊ ? ಎನ್ನದೊ ? ಎಂದುದಾಗಿ,
ಇದು ಕಾರಣ, ನಿನ್ನೊಳಗೆ ನಾನಿಲ್ಲ: ನನ್ನೊಳಗೆ ನೀನಿಲ್ಲ.
ಈ ವಚನದನುಭಾವದ ತೃಪ್ತಿಯನರಿದಡೆ
ನಿನ್ನೊಳಗೆ ನಾನುಂಟು, ಎನ್ನೊಳಗೆ ನೀನುಂಟು.
ಇಂತು ನೀನು ನಾನೆಂಬ ಉಭಯವ ನೀಗಿ [ದ ನಿಲವು] ಕಾಣಾ
ಜಂಗಮಲಿಂಗಪ್ರಭುವೆ.

(ಸಂ. ೧. ವ. ೧)

೨೮೩

ಅಜನೆಂಬ ಅಶ್ವದ ಮೇಲೆ ಹರಿಯೆಂಬ ಹಕ್ಕರಿಕೆಯ ಹಾಕಿ,
ರುದ್ರನೆಂಬ ಕಡಿವಾಣವನಿಕ್ಕಿ ಈಶ್ವರನೆಂಬ ಲಗಾಮವ ಬಿಗಿದು,
ಸದಾಶಿವನೆಂಬ ಚಬಕವ ಪಿಡಿದು,
ಪರಶಿವನೆಂಬ ನಿರಾಳವನೆ ಜೀನವನೆತ್ತಿ.
ಶಶಿ ರವಿಯೆಂಬ ಕೊರಡಿಯಂ ಮೆಟ್ಟಿ,
ಬ್ರಹ್ಮರಂಧ್ರವೆಂಬ ಮೇಲ್ಪಟ್ಟಾವಳಿಯ ಶೃಂಗಾರವಂ ಮಾಡಿಕೊಂಡು.
ಇಪ್ಪತ್ತರ ಮೇಲೆ ನಡುವೆ ಅಷ್ಟತನುವ ಮೆಟ್ಟಿ,
ಶೂನ್ಯನಿರಾಲಂಬ ಬೀದಿಯೊಳು
ಅಲ್ಲಮನೆಂಬ ರಾವುತನು ಹತ್ತಿ ಸಾಧನೆಯ ಮಾಡಲು,
ಅಜನೆಂಬ ಅಶ್ವ ಮುಗ್ಗರಿಸಿತ್ತು.
ಹರಿಯೆಂಬ ಕರಿ ಹರಿಯಿತ್ತು.
ರುದ್ರನೆಂಬ ಕಡಿವಾಣ ಸಡಿಲಿತ್ತು.
ಈಶ್ವರನೆಂಬ ಲಗಾಮು ಕೈಸಡಿಲಿತ್ತು.
ಸದಾಶಿವನೆಂಬ ಚಬಕವು ಕೊರಳ ಸುತ್ತಿತ್ತು.
ಪರಶಿವನೆಂಬ ನಿರಾಳ ಜೀನವು ಹೆಡತಲೆ ಹಿಂದಕಾಯಿತ್ತು.
ಶಶಿ ರವಿಯೆಂಬ ಎರಡು ಪವಡಿ ಅಡಿಯಾಗಿ ನಿಂದವು.
ಇಂತೀ ಬದುಕಿದ ಕುದುರೆಯ ಮೇಲೆ
ಸತ್ತಿರ್ದ ರಾವುತನ ಕಂಡು ಎನಗೊಮ್ಮೆ ಚೋದ್ಯವಾಯಿತ್ತು,
ಕಾಣಾ, ಜಂಗಮಲಿಂಗಪ್ರಭುವೆ.

(ಸಂ. ೧. ವ. ೨)

೨೪೪

ಆದಿ ಅನಾದಿಯ ಕೂಡಿದ ಮಹಿಮಂಗೆ
ಆಧಾರವೆ ಆಚಾರಸ್ಥಲ, ಸ್ವರ್ಶನವೆ ಜಂಗಮಸ್ಥಲ.
ಮಣಿಪೂರಕವೆ ಲಿಂಗಸ್ಥಲ, ಅನಾಹತವೆ ಜಂಗಮಸ್ಥಲ.
ವಿಶುದ್ಧಿಯೆ ಪ್ರಸಾದಿಸ್ಥಲ, ಆಜ್ಞೆಯೆ ಆನಂದಸ್ಥಲ.
ಇಂತೀ ಆರು ಸ್ಥಲಂಗಳು ಮೇಳವಾಯಿತ್ತು.
ಮೇಲಣ ಮೂರುಸ್ಥಲಂಗಳ ಮೀರಲರಿಯದೆ
ಸಂಪರ್ಕವ ಮಾಡುವ ಅಣ್ಣಗಳಿಗೆ
ನಾಲ್ಕು ವೇದ, ಹದಿನೆಂಟು ಪುರಾಣ, ಇಪ್ಪತ್ತೆಂಟು ದಿವ್ಯಾಗಮ,
ಮೂವತ್ತೆರಡು ಉಪನಿಷತ್ತು, ಆರು ಶಾಸ್ತ್ರ,
ಮೂವತ್ತೆರಡು ರಾಗ, ಅರುವತ್ತಾರು ಮಿಶ್ರಾರ್ಪಣ
ಇಂತೀ ಹನ್ನೆರಡುಸಾವಿರ ಗೀತಪ್ರಬಂಧಕ್ಕೆ
ಮುಖ್ಯವಾದ ಬೀಜ ಒಂದೆ; ಓಂಕಾರ ಕಾಣಿಭೋ!
ಆ ಓಂಕಾರಕ್ಕೆ ಸೋಕರಸೋಹಂ ಎಂಬ ಮಹಾವೃಕ್ಷ.
ಅದು ಮಹಾಸಾಜದಿಂದ ವೃಕ್ಷವಾಯಿತ್ತು.
ಆ ಸಾಜವೇನು ವೃಕ್ಷವೆ ? ಅಲ್ಲ. ಬೀಜವೆ ಅಹಂ;
ಈ ಉಭಯವಿಲ್ಲದೆ ನಿರೂಪಿಸುತ್ತಿರ್ದ ಎಂದುದಾಗಿ,
ಭವಿಯೊಳಗೆ ಅಡಗಿರ್ದ ಭಕ್ತ
ಆ ಭಕ್ತನೊಳಗೆ ಅಡಗಿರ್ದ ಮಹೇಶ್ವರ
ಆ ಮಹೇಶ್ವರನೊಳಗೆ ಅಡಗಿರ್ದ ಪ್ರಸಾದಿ
ಆ ಪ್ರಸಾದಿಯೊಳಗೆ ಅಡಗಿರ್ದ ಪ್ರಾಣಲಿಂಗಿ
ಆ ಪ್ರಾಣಲಿಂಗಿಯೊಳಗೆ ಅಡಗಿರ್ದ ಶರಣ
ಆ ಶರಣನೊಳಗಡಗಿರ್ದ ಗುರುವು
ಆ ಗುರುವಿನೊಳಗಡಗಿರ್ದ ಲಿಂಗವು
ಆ ಲಿಂಗದೊಳಗಡಗಿರ್ದ ಜಂಗಮವು
ಆ ಜಂಗಮದೊಳಗಡಗಿರ್ದ ನಿತ್ಯಮುಕ್ತಿ
ಆ ನಿತ್ಯಮುಕ್ತಿಯೊಳಗಡಗಿರ್ದ ನಿರಾಳವೆಂಬ ಮಹಾಪ್ರಕಾಶವು.
ಇವು ಅಡಗಿರ್ದವು ನಿರ್ವಯಲೆಂಬ ದೇಗುಲದೊಳು.
ಆ ದೇಗುಲವ ಹೊಕ್ಕು ಬಾಗಿಲವಂ ತಟ್ಟಿ
ಮೇಗಳ ಶಿಖರವ ಹತ್ತಿ, ನೋಡಲಾಗಿ,

ಬೆಳಗು ನಿಬ್ಬೆಳಗು ನಿರ್ಲೇಪ ನಿಃಕಾಯುವಾದ
ಲಿಂಗೈಕ್ಯನ ಕರಣಪ್ರಸಾದಕ್ಕೆ
ಆನು ಅಂಗೈಸಿ ಬಂದೆನಯ್ಯ ಜಂಗಮಲಿಂಗಪ್ರಭುವೆ.

(ಸಂ. ೧. ವ. ೩)

೨೪೫

ಅಖಂಡಗೋಳಕಾಕಾರ ಸಹಜ ನಿರಂಜನವಸ್ತು
ಲಿಂಗವಾಗಿ ನಿಂದಲ್ಲಿ ಒಂದು ಇತ್ತು.
ಒಂದಾದಲ್ಲಿ ಉಭಯುವಾಗಿತ್ತು, ಪೂಜಿಸಿದಲ್ಲಿ ಮೂರಾಯಿತ್ತು.
ಆಚರಿಸಿದಲ್ಲಿ ಆರಾಯಿತ್ತು, ಆನಂದಿಸಿದಲ್ಲಿ ಮೂವತ್ತಾರಾಯಿತ್ತು.
ಗಣಪ[ಕ್ತಿ?]ತಿಯು ಮಾಡಿದಲ್ಲಿ ಒಂದುನೂರಾ ಹದಿನಾರಾಯಿತ್ತು.
ಅಖಂಡಲಿಂಗದಿಂದ ಚಿದ್ರೂಪಾದ ಪರಿಯುನು
ಶಿಷ್ಯಂಗೆ ಗುರು ನಿರೂಪಿಸುತ್ತಿರ್ದ ಕಾಣಾ,
ಜಂಗಮಲಿಂಗಪ್ರಭುವೆ.

(ಸಂ. ೨. ವ. ೧)

೨೪೬

ಒಂದು ಲಿಂಗದಿಂದ ಉದ್ಭವಿಸಿತ್ತು ಓಂಕಾರ.
ಪ್ರಭುದೇವಂಗೆ ಉದ್ಭವಿಸಿತ್ತು ನಾದ ಬಿಂದು ಕಳೆ.
ಆ ನಾದ ಬಿಂದು ಕಳೆಗೆ ಉದ್ಭವಿಸಿತ್ತು
ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವನು.
ಈ ಪಂಚಬ್ರಹ್ಮದ ಬೆಳೆಯು ಉತ್ಪತ್ಯವ ಹೇಳುತಿರ್ದೆನು,
ಕಾಣಾ, ಜಂಗಮಲಿಂಗಪ್ರಭುವೆ.

(ಸಂ. ೨, ವ. ೨)

೨೪೭

ಹರಹರಯೆಂದು ನುಡಿದರೆ ಜನನ ಮರಣ ಹಿಂಗುವುದೆ ?
ಹಾಂಗೆ ಲೋಕದ ಮಾತ ಕೇಳಲಾಗದೆಂದು ಎಂದುದಾಗಿ,
ಜ್ಯೋತಿಯು ನೆನೆದಡೆ ತಿಮಿರ ಹೋಹುದೇನಯ್ಯಾ ?
ಪರವಧುವ ಬಯಸಿದೊಡೆ ಕಾಮ ಮಾಳ್ಪುದೆ ?
ಪಂಚಾಮೃತವ ನೆನೆದೊಡೆ ಹಸಿವು ತೃಷೆಯಾದಿಗಳು

ಅಡಗುವುದೆ ಹೇಳಾ ?
ಆಗಮ ಶಾಸ್ತ್ರ ಪುರಾಣಂಗಳನೋದಿದರೆ, ಹಾಡಿದರೆ,
ಅನುಭಾವ ಮಾಡಿದರೆ, ಕಿವಿಗೊಟ್ಟು ಕೇಳಿದರೆ
ಅಯ್ಯಾ, ನಿಮ್ಮ ಕಂಡ ಹಾಂಗೆ ಆಯಿತ್ತೆ ?
ಆರಾದರಾಗಲಿ ಕಂಡು ಆಡುವುದು ದಿಟ;
ಕಾಣದೆ ಆಡುವುದೆಲ್ಲ ಸಟೆಯಾಯಿತ್ತು.
ಇದು ಕಾರಣ, ಆ ಸಟೆದಿಟವೆಂಬ
ಉಭಯವ ನೀಗಿ ಕೂಡಿಯಾಡುತಿರ್ದೆನಯ್ಯಾ
ಜಂಗಮಲಿಂಗಪ್ರಭುವೆ.

(ಸ. ೨. ವ. ೩)

೨೪೮

ವಿಘ್ನೇಶ್ವರ ಹರನ ಮಗನೆಂಬ
ಪಂಚಮಹಾಪಾತಕರ ನುಡಿಯ ಕೇಳಲಾಗದು,
ಪಾರ್ವತಿ ಹರನ ಸತಿಯೆಂಬ
ಲಿಂಗದ್ರೋಹಿಗಳ ನೆನೆಯಲಾಗದು.
ಬಹುರೂಪಿ ಹರನ ಸರಿಯೆಂಬ
ಗುರುದ್ರೋಹಿಗಳ ನೆನೆಯಲಾಗದು.
ಅದೆಂತೆಂದಡೆ :
'ಯತ್ರ ಜೀವಾತ್ಮ ತತ್ರ ಶಿವ' ಎಂದೆನಿಸಿಕೊಂಬಾತನೊಬ್ಬ
ಗಣೇಶ್ವರನು.
ಭೂಮಿ ಪೀಠಾಕಾಶವಾಗಿರ್ದಾತನೊಬ್ಬ ಗಣೇಶ್ವರನು.
ಸಿರಿಯಾಳನ ಮಗನ ಬಾಣಸವಮಾಡಿಸಿದಾತನೊಬ್ಬ ಗಣೇಶ್ವರನು.
ಅರ್ಜುನನ ಕೂಡ ಯುದ್ಧವವ ಮಾಡಿ
ತನ್ನ ಸತಿಯಳಿಗೆ ತೋರಿಸಿದಾತನೊಬ್ಬ ಗಣೇಶ್ವರನು.
ಅಂಗಜನ ಸಂಹರವಮಾಡಿದಾತನೊಬ್ಬ
ಆದಿರುದ್ರನೆಂಬ ಗಣೇಶ್ವರನು.
ದಕ್ಷನ ಸಂಹಾರವ ಮಾಡಿದಾತನೊಬ್ಬ ವೀರಭದ್ರನೆಂಬ ಗಣೇಶ್ವರನು.
ಹತ್ತು ಅವತಾರ ವಿಷ್ಣುವಿಂಗೆ.
ಅನಂತ ಅವತಾರ ಬ್ರಹ್ಮಂಗೆ.

ಇಂತಿವರೆಲ್ಲರಿಗೂ ಕಾಲಚಕ್ರ ಕರ್ಮಚಕ್ರ
ನಾದಚಕ್ರ ಬಿಂದುಚಕ್ರ.
ಈ ನಾಲ್ಕೂ ಪ್ರಳಯಚಕ್ರವೆಂದೆನಿಸಿಹವು.
ಇಂತಿವರೊಳಗಾದವರೆಲ್ಲರು ಇನ್ನುಳಿದವರು
ನರದೇಹಿಗಳಿಗೆ ಪ್ರಳಯವು; ಉಪಮಿಸಲಾಗದು.
ಅಜಾತ ಪವಿತ್ರ ನಿರ್ಲೇಪ [[೧]ಜಂಗಮಲಿಂಗ ಪ್ರಭುವೆ[೨]]

(ಸಂ. ೨. ವ. ೪)

೨೪೯

ಇಳೆಯ ಮೇಲಿದ್ದ ಶಿಲೆಯೆಲ್ಲ ಲಿಂಗವಾದರೆ
ಗುರುವಿನ ಹಂಗೇತಕಯ್ಯಾ ?
ಜಲನಿಧಿಗಳೆಲ್ಲ ತೀರ್ಥವಾದರೆ
ಲಿಂಗದ ಹಂಗೇತಕಯ್ಯಾ ?
ಬೆಳೆದ ಬೆಳೆಯೆಲ್ಲ ಪ್ರಸಾದವಾದರೆ
ಜಂಗಮದ ಹಂಗೇತಕಯ್ಯಾ ?—
ಎಂದುದಾಗಿ, ಈ ತ್ರಿವಿಧದ ಹಂಗು ಹಿಂಗಿತು
ಕಾಣಾ, ಜಂಗಮಲಿಂಗಪ್ರಭುವೆ ನಿಮ್ಮ ಶರಣರಿಗೆ.

(ಸಂ. ೨. ವ. ೫)

೨೫೦

ಚತುರ್ವೇದದನುಭಾವವ ಮಾಡುವ
ಜಂಗಮವೆಲ್ಲವು ಬ್ರಹ್ಮನ ಸಂತತಿ.
ಹದಿನೆಂಟು ಪುರಾಣದನುಭಾವವ ಮಾಡುವ
ಜಂಗಮವೆಲ್ಲವು ವಿಷ್ಣುವಿನ ಸಂತತಿ.
ಇಪ್ಪತ್ತೆಂಟು ದಿವ್ಯಾಗಮದನುಭಾವವ ಮಾಡುವ
ಜಂಗಮವೆಲ್ಲವು ರುದ್ರನ ಸಂತತಿ.
ಆರು ಶಾಸ್ತ್ರದನುಭಾವವ ಮಾಡುವ
ಜಂಗಮವೆಲ್ಲವು ಈಶ್ವರನ ಸಂತತಿ.
ಮೂವತ್ತೆರಡು ಉಪನಿಷತ್ತಿನ ಅನುಭಾವವ ಮಾಡುವ

---

೧-೨ ಕೂಡಲಚೆನ್ನಸಂಗಮದೇವ (ಮೂಲ)

ಜಂಗಮವೆಲ್ಲವು ಸದಾಶಿವನ ಸಂತತಿ.
[ಇಂತೀ] ಶಬ್ದಾರ್ಥದನುಭಾವವ [ಬಿಟ್ಟು ಲಿಂಗದನುಭಾವವ]
ಮಾಡುವ ಜಂಗಮವೆಲ್ಲ ಘನನಿತ್ಯ ಕಾಣಾ,
ಜಂಗಮಲಿಂಗಪ್ರಭುವೆ.

(ಸಂ. ೩, ವ. ೧)

೨೫೧

ಬ್ರಹ್ಮನ ಸಂತತಿ ಭಕ್ತಸ್ಥಲಕೆ ಸಂದಿತ್ತು
ವಿಷ್ಣುವಿನ ಸಂತತಿ [1]ಮಾಹೇಶ್ವರ ಸ್ಥಲಕೆ[2] ಸಂದಿತ್ತು.
[ರುದ್ರನ ಸಂತತಿ ಪ್ರಸಾದಿಸ್ಥಲಕೆ ಸಂದಿತ್ತು].
ಈಶ್ವರನ ಸಂತತಿ ಪ್ರಾಣಲಿಂಗಿಸ್ಥಲಕೆ ಸಂದಿತ್ತು.
ಸದಾಶಿವನ ಸಂತತಿ ಶರಣಸ್ಥಲಕೆ ಸಂದಿತ್ತು.
ಪರಶಿವನ ಸಂತತಿ ಐಕ್ಯಸ್ಥಲಕೆ ಸಂದಿತ್ತು.
ಇಂತಿಪ್ಪವು ಕೂಡಿ ಇಷ್ಟಲಿಂಗವಾಗಿ ನಿಂದಡೆ,
ಅದು ನಾನು ನೀನೆಂಬ ಉಭಯವಿಲ್ಲದಂತೆ ಆಯಿತ್ತು ಕಾಣಾ,
ಜಂಗಮಲಿಂಗಪ್ರಭುವೆ.

(ಸಂ. ೩, ವ. ೨)

೨೫೨

ಹಾಡಿ ಹೊಗಳುವ ಜಂಗಮವೆಲ್ಲ ಬ್ರಹ್ಮನ ಸಂತತಿ.
ಕಾಡಿ ಬೇಡುವ ಜಂಗಮವೆಲ್ಲ ವಿಷ್ಣುವಿನ ಸಂತತಿ.
ಹಾಗವರಿಯದೆ[1] ಹೊಕ್ಕುಂಬುವ ಜಂಗಮವೆಲ್ಲ ರುದ್ರನ ಸಂತತಿ.
ವ್ಯಾಪಾರವ ಮಾಡುವ ಜಂಗಮವೆಲ್ಲ ಈಶ್ವರನ ಸಂತತಿ.
ದಯಾಭಾವ ಭಕ್ತಿಯ ಮಾಡುವ ಜಂಗಮವೆಲ್ಲ ಸದಾಶಿವನ ಸಂತತಿ.–
ಎಂದುದಾಗಿ, ಹಾಡದೆ ಹೊಗಳದೆ ಕಾಡದೆ ಬೇಡದೆ
ಹಾಗವರಿಯದೆ], ಹೊಗದೆ, ವ್ಯಾಪಾರವ ಮಾಡದೆ,
ಭಕ್ತಿಗೆ ತೊಲಗದೆ, ಯುಕ್ತಿಗೆ ಅನುಭಾವವ ಮಾಡದೆ,
ಭಿಕ್ಷೆಯೆಂದು, ಶಬ್ದದಲ್ಲಿ ಇದಿರಿಟ್ಟು,
ಪದಾರ್ಥ[ವ] ಲಿಂಗಕ್ಕರ್ಪಿತವ ಮಾಡುವ
ನಿಜಮುಕ್ತ ಶರಣನ ಅಂಗದಲ್ಲಿ,
ಆಕಾಶ ಮಹದಾಕಾಶವನೊಳಕೊಂಡು ನಿಂದಿರ್ದು

---

೧–೨ ಪ್ರಸಾದಿಸ್ಥಲಕೆ (ಮೂಲ)

ಘನಲಿಂಗಾರ್ಪಿತವ ಮಾಡುವುದು.
ಅಂಥ ಘನಲಿಂಗವ ಸಂಬಂಧಿಸಿದ ಗುರು ಆರೆಂದಡೆ,
ಅದು ಅನಾದಿ ಸಂಜ್ಞೆಯೆಂಬ ಜಂಗಮವು.
ಅಂಥ ಜಂಗಮದ ಶ್ರೀ ಚರಣವ ನೆರೆನಂಬಿ
ನಟಿಸುವ ತಿರುಕರ ಕರುಣವೆನಗೆ ತೋರಯ್ಯಾ
[^೧ಜಂಗಮಲಿಂಗ ಪ್ರಭುವೆ^೨]

(ಸಂ. ೩, ವ. ೩)

---

೧-೨ ನಿ: ಕಳಂಕಚೆನ್ನಮಲ್ಲಿಕಾರ್ಜುನ (ಮೂಲ)

೨೫೩

ಹರನಟ್ಟಿದ ಆಗ್ರಹದ ನಿಗ್ರಹದ ಬೆಸನ
ಗುರುನಿರೂಪವೆಂದು ಕರುಣಿ ಬಸವಣ್ಣ ಕೈಕೊಂಡು
ಏಳನೂರೆಪ್ಪತ್ತು ಅಮರಗಣಂಗಳು ಸಹಿತ
ಗುರುಲಿಂಗಜಂಗಮಕ್ಕೆ ಭಕ್ತಿಯ ಮಾಡಬೇಕೆಂದು
ಕೈಲಾಸದಿಂ ಮರ್ತ್ಯಕ್ಕೆ ತಂದನಯ್ಯಾ ಬಸವಣ್ಣ.
ಲೋಕಾದಿಲೋಕಂಗಳಿಗೆ ಪರಮಗುರುವಾದನಯ್ಯಾ ಬಸವಣ್ಣ.
ಜಡರುಗಳ ಮನದ ಕಳ್ತಲೆಯ ಕಳೆಯ ಬೇಕೆಂದು
ಕಲ್ಯಾಣದಲ್ಲಿ ಕಟ್ಟಿದನಯ್ಯಾ ಮಹಾದೇವನ ಮಂಟಪ,
ಪರಮನಟ್ಟಿದ ಓಲೆ ಬಂದಿಳಿಯಿತ್ತು ಬಿಜ್ಜಳನ ಸಿಂಹಾಸನದ ಮುಂದೆ.
ಅದ ಕಂಡು ಓದಿಸಲು ಸೃಷ್ಟಿಯ ಸೇನಬೋವಶ್ರೀಗಳಿಗೆ ತಿಳಿಯದು,
ಛಪ್ಪನ್ನಭಾಷೆಯ ಲಿಪಿ ಮುನ್ನಲ್ಲ.
ಅದನೋದಿದವಗೆ ಆನೆ ಸೇನೆ ಕುದುರೆ ಭಂಡಾರ
ಅರುವತ್ತಾರುಕರುಣಿಕಕ್ಕೆ ಮುಖ್ಯನಮಾಡುವೆನೆಂದು
ಬಿಜ್ಜಳ ಭಾಷೆಯ ಕೊಡುತ್ತಿರಲು,
ಹರನಿರೂಪವ ಶಿರದ ಮೇಲಿಟ್ಟು ಶಿವಶರಣೆಂದು
ಬಸವಣ್ಣನೋದಿ ಮೆಟ್ಟತೆಗೆಸಿದನಯ್ಯಾ
ಅರುವತ್ತಾರುಕೋಟಿ ವಸ್ತುವ.!
ಅರಮನೆ ರಾಜ್ಯಕ್ಕೆ ಒಡೆಯನಾದಯ್ಯಾ ಬಸವಣ್ಣನು.
ಹರಶರಣರಿಗೆ ಗತಿಮತಿ ಚೈತನ್ಯ ತಾನೆಯಾದನಯ್ಯಾ ಬಸವಣ್ಣ.
ಇದು ಕಾರಣ ಕೂಡಲಚೆನ್ನಸಂಗಯ್ಯಾ, ಅಂಡಜದೊಳಗಿರ್ದು
ಶಿವನ ಭಂಡಾರಿಯಾದನಯ್ಯಾ ಎನ್ನ ತಂದೆ
ಪೂರ್ವಾಚಾರಿ ಸಂಗನಬಸವಣ್ಣನು. ॥೧॥

೨೫೪

ಜಲದಲುದ್ಭವಿಸಿ ಜಲವು ತಾನಲ್ಲ.
ಜಲವೆಂದಿಪ್ಪರೀ ಲೋಕದ ಮನುಜರು.
ಪರಮಗುರು ಬಸವಣ್ಣ ಜಗವಪಾಲಿಸ ಬರಲು
ಎನ್ನ ಪರಿಭವದ ದಂದುಗವು ಹರಿಯಿತ್ತಯ್ಯಾ,

ಆ ಸುದ್ದಿಯನರಿಯದೆ ಅನೇಕ ಜಡರುಗಳೆಲ್ಲಾ
ಬೇಕಾದ ಪರಿಯಲ್ಲಿ ನುಡಿವುತಿಪ್ಪರು.
ಸತ್ತ ಪ್ರಾಣವನೆತ್ತಿ ಒಪ್ಪಿಪ್ಪ ನಿಶ್ಚಯವು
ಮರ್ತ್ಯರಿಗುಂಟೆ ಶಿವಂಗಲ್ಲದೆ ?
ಶಿವಗುರು ಬಸವಣ್ಣ ಬಸವಗುರು ಶಿವನಾಗಿ
ದೆಸೆಗೆಟ್ಟ ದೇವತಾಪಶುಗಳಿಗೆ ಪತಿಯಾದನಯ್ಯಾ ಬಸವಣ್ಣನು.
ಬಸವಣ್ಣನ ನೆನಹು ಸುಖಸಮುದ್ರವಯ್ಯಾ
ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ. ಬಸವಣ್ಣನ ತೋರಿದಿರಾಗಿ
ಬದುಕಿದೆನಯ್ಯಾ ಪ್ರಭುವೆ. ॥೨॥

೨೫೫

ಇಟ್ಟಿಯ ಹಣ್ಣ ಸರಿ ತಿಂದು ಸೃಷ್ಟಿ ತಿರಿಗಿತೆಂಬಂತೆ
ಮಟ್ಟಿಯ ನಿಟ್ಟ ದ್ವಿಜರ ಮಾತದೇಕೆ ?
ಹಗಲ ಕಾಣದ ಗೂಗೆ ಇರುಳಾಯಿತೆಂದರೆ
ಜಗಕೆ ಇರುಳಪ್ಪುದೆ ಮರುಳೆ ?
ಹೋಮದ ನೆವದಲ್ಲಿ ಹೋತನು ಕೊಂದು ತಿಂಬ
ಅನಾಮಿಕರೊಡನೋಡಿ ಗೆಲುವುದೇನು ಕೂಡಲಸಂಗಮದೇವಾ. ॥೩॥

೨೫೬

ಎನಿಸನೋದಿದರೇನು ಎನಿಸಕೇಳಿದರೇನು
ಚತುರ್ವೇದಪಾಠ ತೀವ್ರವಾದರೇನು
ಲಿಂಗಾರ್ಚನ ಹೀನವಾದಡೆ
ಶಿವಶಿವಾ ಬ್ರಾಹ್ಮಣನೆಂಬೆನೆ ? ಎನಲಾಗದು.
'ಜನ್ಮನಾ ಜಾಯತೇ ಶೂದ್ರೋ ಕ್ರಿಯಾ ದ್ವಿಜ ಉಚ್ಯತೇ
ಶ್ರುತಿ ಶ್ರೋತ್ರಿಶ್ಚೈವ ಬ್ರಹ್ಮಚಾರೀತು ಬ್ರಾಹ್ಮಣಃ' ।-
ಎಂದುದಾಗಿ, ಬ್ರಹ್ಮನಾಸ್ತಿ ಸ್ವಪಚರಮನೆ ಎಂದುದಾಗಿ.
ಇದು ಕಾರಣ ಕೂಡಲಸಂಗಮದೇವಾ
ವೇದಭಾರಭಾರಾಕ್ರಾಂತಃಕೋ ಬ್ರಾಹ್ಮಣರ ಗಾರ್ದಭನೆಂಬೆನೂ. ॥೪॥

೨೫೭

ವಿಷ್ಣು ಕರ್ಮಿ ರುದ್ರ ನಿಃಕರ್ಮಿ
ಕ್ರಮವನರಿಯದೆ ನುಡಿಯದಿರಿ.
ಆ ವೇದ ಶ್ರುತಿಗಳ ತಿಳಿಯಲರಿಯದೆ

ವಾದವ ಮಾಡುವರಲ್ಲಾ !
ವಿಷ್ಣು ನಾನಾ ಯೋನಿಗಳಲ್ಲಿ ಬಾರದ ಭವಂಗಳಲ್ಲಿ ಬರುತಿರ್ಪ.
ರುದ್ರನಾವ ಯೋನಿಯಲ್ಲಿ ಬಂದನೆಂದು ನೀವು ಪೇಳಿರೊ.
"ವಿಷ್ಣುಕರ್ಮಾಣಿ ಪಶ್ಯತ. ಏಕೋ ವ್ರತಾನಿ ಪಶ್ಯಸೆ
ಇಂದ್ರಾನು ಯೂಜ್ಯ ಸಂಖ್ಯಾಸ್ತ್ರೀಣಿ ಪದಾ ವಿಚಕ್ರಮೆ.
ವಿಷ್ಣುಗೋಪಾಲದಾಭ್ಯಾಂ ಅತೋ ಕರ್ಮಾಣಿ ಧಾರಯನ್.
ತದ್ವಿಪ್ರಾಣೋ ವಿಪನ್ಯವೋಜ ಗ್ರಹವಾಸ ಸಮಿಂಧತೆ!
ವಿಷ್ಣೋರ್ಯತ್ಪರಮಂ ಪದಂ". ಎಂಬ ಶ್ರುತಿವಚನ ತಿಳಿಯಿರೊ.
ಆ ವರ್ಮವನೆತ್ತಿ ನುಡಿದಲ್ಲದೆ ನಿಲ್ಲಿರಿ.
ನಿಮ್ಮ ಕರ್ಮವು ಅತ್ಯತಿಷ್ಠದ್ದಶಾಂಗುಲದತ್ತಲೆ
ಕೂಡಲಸಂಗಮದೇವಾ. ॥೫॥

೨೫೮

'ಈಶ್ವರ ಭಾಷಕಂ ಕಿಂ ಪ್ರಮಾಣ'ಮೆಂಬ
ಮೀಮಾಂಸಕನ ಮೂಗ
'ಓಂ ಭೂಮಿಂಜನಯುನ್ ದೇವ ನೀಕಃ' ಎಂಬ
ಕತ್ತಿಯಲ್ಲಿ ಕೊಯಿದು,
ವೈಶೇಷೀಕವೆಂಬಿಟ್ಟಿಗೆಯಲೊರಸಿ
ಕೂಡಲಸಂಗಮದೇವರೆಂಬ ಕನ್ನಡಿಯ ತೋರುವೆ. ॥೬॥

೨೫೯

ಮಾತಿನಲ್ಲಿ ಶ್ರೋತ್ರಸುಖವ ನುಡಿಯಬಹುದಲ್ಲದೆ
ಮಾಡುವ ಸತ್ಕ್ರಿಯಿಂದ ಭಕ್ತನೆನಿಸಬಾರದು.
ಅರ್ಥಪ್ರಾಣಾಭಿಮಾನವಾರಿಗೆಯೂ ಸಮನಿಸದು
ಲಿಂಗಮುಖದಲುದಯವಾದ ಶರಣಂಗಲ್ಲದೆ.
ಅಯ್ಯಾ ಕೂಡಲಸಂಗನ ಶರಣರ ಭಕ್ತಿಭಂಡಾರವು
ಎನಗೆಂತು ಸಾಧ್ಯವಪ್ಪುದು ಹೇಳೆನ್ನ ತಂದೆ ? ॥೭॥

೨೬೦

ಲಿಂಗದಲ್ಲಿ ಕಠಿಣವುಂಟೆ ?
ಜಂಗಮದಲ್ಲಿ ಕುಲವುಂಟೆ ?
ಪ್ರಸಾದದಲ್ಲಿ ಅರುಚಿವುಂಟೆ ?

ಈ ತ್ರಿವಿಧದಲ್ಲಿ ಭಾವಭೇದವನರಸುವೆನು!
ಕೂಡಲಸಂಗಮದೇವಾ, ಧಾರೆವಟ್ಟಲೆನ್ನ ಭಕ್ತಿ. ॥೮॥

೨೬೧

ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆನ್ನ ಬಾಳುವೆ
ಸಂಸಾರ ಸಂಗ ಎನ್ನ ಬಿಡದು ನೋಡೆನ್ನ ಮನವು.
ಈ ನಾಯಿತನವಮಾಣಿಸು ಕೂಡಲಸಂಗಮದೇವ ನಿಮ್ಮ ಧರ್ಮ.

೨೬೨

ಸುಬುದ್ಧಿಯೆಂಬ ಕೊಪ್ಪರವನಿಕ್ಕಿ
ವಿಷಯವೆಂಬ ಹಾವುಗೆಯ ಮೆಟ್ಟಿ
ತಮಂಧವೆಂಬ ಕುಳಿಯಲ್ಲಿ ಬೀಳದೆ
ವೈರಾಗ್ಯವೆಂಬ ಕೊರಡನೆಡಹದೆ
ಮದವೆಂಬ ಚೇಳ ಮೆಟ್ಟದೆ ಗುಹೇಶ್ವರನ ಶರಣ ಬಂದನು
ಭಕ್ತಿ ಭಿಕ್ಷೆಯನಿಕ್ಕ ಸಂಗನಬಸವಣ್ಣ. ॥೯॥

೨೬೩

ಹೊನ್ನಿಂಗೆ ಬಂದಾತನಲ್ಲ, ಹೆಣ್ಣಿಂಗೆ ಬಂದಾತನಲ್ಲ.
ಮಣ್ಣಿಂಗೆ ಬಂದಾತನಲ್ಲ,
ಅನ್ನಕ್ಕೆ ಬಂದಾತನಲ್ಲ, ವ್ಯಸನಕ್ಕೆ ಬಂದಾತನಲ್ಲ.
ಕೂಡಲಚೆನ್ನ ಸಂಗಯ್ಯ,
ಭಕ್ತಿಪಥನತೋರ ಬಂದನಯ್ಯ ಪ್ರಭು ದೇವರು. ॥೧೦॥

೨೬೪

ಬಸವೇಶ್ವರದೇವರು ತೃಣಪುರುಷನಂ ಮಾಡಿ
ಮೀಮಾಂಸಕಂಗೆ ಉತ್ತರವಂ ಕೊಡು ಹೋಗೆನಲು
ಆ ತೃಣಪುರುಷನು ಮಹಾಪ್ರಸಾದವೆಂದು ಕೈ ಕೊಂಡು
ಮೀಮಾಂಸಕಂಗೆ ಉತ್ತರವಕೊಟ್ಟು, ಶಿವವಿರಹಿತವಾದ
ಕಾಳ್ಪುರಾಣವೆಲ್ಲವಂ ಬಯಲುಮಾಡಿ ಸುಡಿಯಲು,
ಆತಂಗೆ ಶಿವಜ್ಞಾನಂ ತಲೆದೋರಲು,
ಬಸವೇಶ್ವರಂಗೆ ವಂದನೆಯುಂಗೆಯ್ದು ಉಪದೇಶವ ಮಾಡಬೇಕೆನಲು
ಆತಂಗೆ ವೀರಶೈವದೀಕ್ಷೆಯುಂ ಮಾಡಿ,

ಷಟ್ಸ್ಥಲಮಾರ್ಗಕ್ರಿಯೆಯುಂ ನಿರೂಪಿಸಿ ತಿಳುಪಲು,
ಎಲೆ ಬಸವೇಶ್ವರ, ಜಂಗಮದ ಪಾದತೀರ್ಥ ಪ್ರಸಾದಮಂ
ಲಿಂಗಕ್ಕೆ ಕೊಟ್ಟುಕೊಳಬಹುದೆ ಎಂದು ಕೇಳಲು,
ಕೇಳ್ಳೈ ಮೀಮಾಂಸಿಕಾ, ಪೂರ್ವದಲ್ಲಿ ಪರಮೇಶ್ವರನು
ಕೈಲಾಸದಲ್ಲಿ ಸಮಸ್ತ ದೇವಗಣಂಗಳು ಒಡ್ಡೋಲಗಂಗೊಟ್ಟಿರಲು,
ಸೂತ್ರಿಕನೆಂಬ ಶೈವಾಚಾರನು, ಎಲೆ ಪರಮೇಶ್ವರ,
ಜಂಗಮದ ಪಾದತೀರ್ಥ ಪ್ರಸಾದವನು ಲಿಂಗಕ್ಕೆ ಕೊಡಬಹುದೆ? ಎನಲು
ಎಲೆ ಸೂತ್ರಿಕ ಕೇಳು, ನಾನೆಂದಡೂ ಜಂಗಮವೆಂದಡೂ ಬೇರಲ್ಲ.
ಅದು ಕಾರಣ. ಜಂಗಮಲಿಂಗವೇ ಅಧಿಕ.
ನೀನಾ ಜಂಗಮಲಿಂಗದ ಪಾದತೀರ್ಥ ಪ್ರಸಾದವ
ಲಿಂಗಕ್ಕೆ ಕೊಡಬಹುದೆಯೆಂದು
ಶಂಕಿಸಿ ನುಡಿದ ವಾಗ್ದೋಷಕ್ಕೆ ಮರ್ತ್ಯಕ್ಕೆ ಹೋಗಿ
ಸೂಕರನ ಬಸುರಲ್ಲಿ ಹುಟ್ಟಿ ಹದಿನೆಂಟು ಜಾತಿಯ
ಅಶುದ್ಧಿಯನು ನಾಲಗೆಯಲ್ಲಿ ಭುಂಜಿಸಿ
ನರಕಜೀವಿಯಾಗಿರೆಂದುದೇ ಸಾಕ್ಷಿ-
'ಜ್ಞಾನಾರ್ಥಂ ಸೂಕರೋ ದೇಹಿ ಯಥಾ ಮರ್ತ್ಯಸ್ಯ ಸೂತ್ರಿಕ,
ಭೂಯೋ ಪ್ರಸಾದಂ ಭುಂಜೀಕ ಗಣೇಶತ್ವಮವ್ಯಾಪ್ಸ್ಯಸಿ'
ಇದನರಿತು ಮತ್ತೆ ಜಂಗಮದ ತೀರ್ಥಪ್ರಸಾದವ
ಲಿಂಗಕ್ಕೆ ಕೊಟ್ಟುಕೊಳಬಾರದೆಂಬ ಪಂಚಮಹಾಪಾತಕರ
ಮಾತ ಕೇಳಲಾಗದು, ಅದೆಂತೆಂದಡೆ ವೀರಾಗಮದಲ್ಲಿ
ಸಾಕ್ಷಿ—
ಅಹಂ ಮಹೇಶ್ವರ ಪ್ರಾಣೋ ಮಮ ಪ್ರಾಣೋ ಮಹೇಶ್ವರಃ
ತಸ್ಮಾದವಿರಳಂ ನಿತ್ಯಂ । ಶರಣ್ಯಂ ನಾಮವರ್ತತೇ
ಜಂಗಮಾನಾಮಹಂ ಪ್ರಾಣೋ ಮಮ ಪ್ರಾಣೋ ಜಂಗಮಃ
ಜಂಗಮಾನಾಮಹಂ ಪೂಜ್ಯಾ ಮಮ ಪೂಜ್ಯೋಹಿ ಜಂಗಮಃ
ಪರಸ್ಪರಮಭಿನ್ನತ್ವಾಜ್ಜಂಗಮಸ್ಯ ಮಮಸ್ಯ ಚ
ಪಾದೋದಕ ಪ್ರಸಾದೆ ನವಿನಾತೃಪ್ತಿರ್ನಜಾಯತೇ ಎಂದುದಾಗಿ,
ಇಂತೆಂಬ ಶಿವವಾಕ್ಯವನರಿತು
ಜಂಗಮದ ಪಾದತೀರ್ಥವ ಲಿಂಗಕ್ಕೆ ಮಜ್ಜನಕ್ಕೆರೆದು
ಪ್ರಸಾದವ ಲಿಂಗಕ್ಕೆ ನೈವೇದ್ಯವ ಸಮರ್ಪಿಸಿ
ಭೋಗಿಸುವಾತನೆ ಸದ್ಭಕ್ತ. ಆತನೇ ಮಹೇಶ್ವರ

ಆತನೆ ಪ್ರಸಾದಿ ಆತನೇ ಪ್ರಾಣಲಿಂಗಿ
ಆತನೆ ಶರಣ ಆತನೆ ಐಕ್ಯ.
ಇಂತಪ್ಪ ಷಟ್‌ಸ್ಥಲಬ್ರಹ್ಮಿಗೆ ನಮೋ ನಮೋ ಎಂಬೆ.
ಇಂತಲ್ಲದೆ ಜಂಗಮದ ಪಾದತೀರ್ಥ ಪ್ರಸಾದ[ರ]ಹಿತವಾಗಿ
ಆವನೊಬ್ಬನು ತನ್ನ ಇಷ್ಟಲಿಂಗಕ್ಕೆ
ಅಷ್ಟವಿಧಾರ್ಚನೆ ಷೋಡಶೋಪಚಾರ ಕ್ರಿಯೆಯಿಂದ
ಪೂಜೆಯ ಮಾಡುವಲ್ಲಿ ಜಂಗಮದಪಾದತೀರ್ಥ ಪ್ರಸಾದವಿಲ್ಲದೊಡೆ
ಆವ ಶುದ್ಧಶೈವನು; ವೀರಶೈವನಲ್ಲ ಅವಂಗೆ ಮುಕ್ತಿಯಿಲ್ಲ.
ಕಾಣಾ ಕೂಡಲಚೆನ್ನಸಂಗಮದೇವಾ ॥೧೨॥

೨೬೫

ಅಗ್ನಿಯಾಧಾರದಲ್ಲಿ ಕಬ್ಬುನ ನೀರುಂಬುದಯ್ಯಾ.
ಭೂಮಿಯಾಧಾರದಲ್ಲಿ ವೃಕ್ಷ ನೀರುಂಬುದಯ್ಯಾ.
ಜಂಗಮವಾಪ್ಯಾಯನವಾದರೆ
ಲಿಂಗ ಸಂತುಷ್ಟಿಯಹುದಯ್ಯಾ.
ವೃಕ್ಷಸ್ಯ ವದನಂ ಭೂಮಿಃ । ಸ್ಥಾವರಸ್ಯ ಚ ಜಂಗಮಃ
ಮಮ ತೃಪ್ತಿರುಮಾದೇವಿ ಉಭಯೋ ಲಿಂಗ ಜಂಗಮಾನ್ ॥
ಇದು ಕಾರಣ, ಕೂಡಲಸಂಗಮದೇವರಲ್ಲಿ
ಜಂಗಮವಾಪ್ಯಾಯನವಾದರೆ ಲಿಂಗ ತುಷ್ಟಿಯಹುದಯ್ಯಾ. ॥೧೩॥

೨೬೬

ಮನ ಮನ ಬೆರಸಿದಲ್ಲಿ ತನುಕರಗದಿರ್ದಡೆ
ಸೋಂಕಿನಲ್ಲಿ ಪುಳಕಂಗಳು ಹೊರಹೊಮ್ಮದಿರ್ದಡೆ
ಕಂಡಾಗಳಶ್ರುಜಲಂ ಸುರಿಯದಿರ್ದಡೆ
ನುಡಿಯಲ್ಲಿ ಗದ್ಗದಂಗಳು ಪೊಣ್ಮದಿರ್ದಡೆ
ಕೂಡಲಸಂಗಮದೇವರ ಭಕ್ತಿಗಿದು ಚಿಹ್ನ;
ಎನ್ನಲ್ಲಿ ಇಲ್ಲಾಗಿ ಆನು ಡಂಬಕ ಕಾಣಿರೆ. ॥೧೪॥

೨೬೭

ಎಡದ ಕೈಯಲ್ಲು ಪಾಲುಬಟ್ಟಲು
ಬಲದ ಕೈಯಲ್ಲು ಓಜೆಗಟ್ಟಿಗೆ

ಆವಾಗ ಬಂದಾನೋ ನಮ್ಮಯ್ಯ
ಪಿಡಿದು ಹಾಲು ಕುಡಿಸುವ ತಂದೆ.
'ದಂಡಕ್ಷೀರದ್ವಯಂ ಹಸ್ತೇ ಜಂಗಮೋ ಭಕ್ತಿ ಮಂದಿರಃ
ಅರಿ ಭಕ್ತಿಲಿಂಗ ಸಂತುಷ್ಟಿಃ ಆಪಹಾಸ್ಯಂ ಯಮದಂಡನಂ'
ಎಂದುದಾಗಿ, ಕೂಡಲಸಂಗಮದೇವಯ್ಯ
ತಾನೆ ಭಕ್ತಿಯ ಪಥವ ತೋರುವ ತಂದೆ. ॥೧೫॥

೨೬೮

ಜಂಗಮದ ಮನಭಾವದಲ್ಲಿ ಭಕ್ತನೇ ಭೃತ್ಯನೆಂದು
ಭಕ್ತನ ಮನಭಾವದಲ್ಲಿ ಜಂಗಮವೆ ಕರ್ತನೆಂದು ಇದ್ದ ಬಳಿಕ,
ಬಂದುದು ಬಾರದುದು ಇದ್ದುದು ಹೋಯಿತ್ತು ಎಂಬ
ಸಂದೇಹವಿಲ್ಲದಿರಬೇಕು.
ಹೋಯಿತ್ತು ಎಂಬ ಗುಣವುಳ್ಳನ್ನಕ್ಕ ನಿಮಗೆ ದೂರ.
ನಿಮ್ಮವರಿಗೆ ಮುನ್ನವೆ ದೂರ.
ಶಿವಾಚಾರಕ್ಕಲ್ಲಿಂದತ್ತವೆ ದೂರ.
ಜಂಗಮದ ಹರಿದ ಹರಿವು ನಿಂದ ನಿಲವು
ಜಂಗಮದ ಗಳಗರ್ಜನೆ ಜಂಗಮದ ಕೋಳಾಟಕ್ಕೆ
ಸೈರಿಸದಿರ್ದರೆ ನೀನಂದೆ ಮೂಗಕೊಯಿ, ಕೂಡಲಸಂಗಮದೇವಾ. ॥೧೬॥

೨೬೯

ಭಕ್ತನ ಮಠವೆಂದು ಜಂಗಮ ನಡೆದು ಬಂದಲ್ಲಿ
ಆ ಭಕ್ತನು ಕಾಣುತ್ತ ಆಸನ ತ್ಯಜತೆಯ ಮಾಡುತ್ತ
ಕೈಮುಗಿದು ನಿಂದಿರ್ದು ಬಾಗಿ ಬಳುಕುತ್ತ
ಬಿಜಯಂ ಮಾಡಿ ಸ್ವಾಮಿ- ಎಂದು ಕರೆದು ಕುಳ್ಳಿರಿಸಿ,
ಪಾದಾರ್ಚನೆಯ ಮಾಡಿ ಪಾದೋದಕಮಂ ಕೊಂಡು
ವಿಭೂತಿ ವೀಳೆಯಮಂ ಕೊಟ್ಟು ಕಂಗಳು ತುಂಬಿ
ನಿರೀಕ್ಷಿಸಿ ಶ್ರೋತ್ರವು ತುಂಬಿ ಹಾರೈಸಿ
ಬಾಯಿ ತುಂಬ ಮಾತಾಡಿ, ಎಗುವದೆ ಬೆಸನೆಂದು
ತನುಕರಗಿ ಮನಂ ಕರಗಿ ನೀಡಿ ಮಾಡುವುದು ಭಕ್ತಿಸ್ಥಲ.
ಬಡವನಾಗಲಿ ಬಲ್ಲಿದನಾಗಲಿ ಇನಿತು ಮುಖ್ಯವಾಗಿ
ಮಾಡಿಸಿಕೊಂಬುದು ಜಂಗಮ ಸ್ಥಲ.

ಎರಡೊಂದಾದುದ ಘನವನಂತಿಂತೆಂದುಪಮಿಸಬಾರದು.
ಅಂತಿರಲಿ, ಇನಿತಲ್ಲದೆ ಮಾಡಿದಮಾಟ ಭಕ್ತಿಸ್ಥಲಕ್ಕೆ ಸಲ್ಲದು :
ಫಲದಾಯಕನೈಸೆ. ಇನಿತಲ್ಲದೆ ಮಾಡಿಸಿಕೊಂಬುದು
ಜಂಗಮಸ್ಥಲಕ್ಕೆ ಸಲ್ಲದು : ಉಪಜೀವಿಕನೈಸೆ. ಈ ಎರಡಕ್ಕೂ
ಭವಹಿಂಗದು ಕಾಣಾ, ಕೂಡಲಸಂಗಮದೇವಾ. ॥೧೭॥

೨೭೦

ಸದ್ಗುರುವಿನಿಂದವೆ ಮಹತ್ತಪ್ಪ ಲಿಂಗೋತ್ಪತ್ತಿ.
ಲಿಂಗದಿಂದವೆ ಮಹತ್ತಪ್ಪ ಜಂಗಮೋತ್ಪತ್ತಿ.
ಜಂಗಮದಿಂದವೆ ಮಹತ್ತಪ್ಪ ಪ್ರಸಾದೋತ್ಪತ್ತಿ.
ಪ್ರಸಾದದಿಂದವೆ ಮಹತ್ತಪ್ಪ ಭಕ್ತ್ಯುತ್ಪತ್ತಿ.
ಭಕ್ತಿ ಪ್ರಸಾದದಿಂದ ಸಕಲೋತ್ಪತ್ತಿ.
ಇದು ಕಾರಣ ಪ್ರಸಾದವುಳ್ಳವಂಗೆ ಭಕ್ತಿಯುಂಟು.
ಭಕ್ತಿಯುಳ್ಳವಂಗೆ ಜಂಗಮವುಂಟು.
ಜಂಗಮವುಳ್ಳವಂಗೆ ಲಿಂಗವುಂಟು.
ಲಿಂಗವುಳ್ಳವಂಗೆ ಗುರುವುಂಟು.
ಇದು ಕಾರಣ ಸದ್ಗುರುವೆ ಸರ್ವಕಾರಣ.
ಶ್ರುತಿ—
ಸದ್ಗುರುರ್ದೀಯತೇ ಲಿಂಗಂ ಸದ್ಗುರುದೀಯತೇ ಕ್ರಿಯಾಂ
ಸದ್ಗುರುಗೀಯತೇ ಮಂತ್ರಂ ಸದ್ಗುರು ಸರ್ವ ಕಾರಣಂ- ॥
ಎಂದುದಾಗಿ ಸದ್ಗುರುವೆ ಸರ್ವಕ್ಕೆ ಶ್ರೇಷ್ಠನು,
ಸದ್ಗುರುವೆ ಸರ್ವಕ್ಕೆ ಪೂಜ್ಯನು, ಸದ್ಗುರುವೆ ಸರ್ವಕ್ಕೆ ಕಾರಣವಯ್ಯಾ
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ. ॥೧೮॥

೨೭೧

ಲಿಂಗವಿಲ್ಲದೆ ನುಡಿವನ, ಲಿಂಗವಿಲ್ಲದೆ ನಡೆವನ,
ಲಿಂಗವಿಲ್ಲದೆ ಉಗುಳು ನುಂಗಿದರೆ ಅಂದಂದಿಗೆ ಕಿಲ್ಬಿಷವಯ್ಯಾ.
ಏನೆಂಬೆನೇನೆಂಬೆ ? ಲಿಂಗವಿಲ್ಲದೆ ನಡೆವನ
ಅಂಗ ಲೌಕಿಕ : ಮುಟ್ಟಲಾಗದು.
ಲಿಂಗವಿಲ್ಲದೆ ನುಡಿವ ಶಬ್ದ ಸೂತಕ : ಕೇಳಲಾಗದು.
ಲಿಂಗವಿಲ್ಲದೆ ಗಮಿಸಿದರೆ ನಡೆನುಡಿಗೊಮ್ಮೆ ವ್ರತಗೇಡಿಗಳೆಂಬೆ
ಕೂಡಲಸಂಗಮದೇವಾ. ॥೧೯॥

೨೭೨

ಅಡ್ಡವಿಭೂತಿ ಇಲ್ಲದವನ ಮುಖ ಹೊಲ್ಲ; ನೋಡಲಾಗದು.
ಲಿಂಗವಿಲ್ಲದವನಂಗಳ ನರವಿಂದ್ಯ; ಹೊಗಲಾಗದು.
ದೇವಾ ಭಕ್ತರಿಲ್ಲದೂರು ಸಿನೆ ಹಾಳು ಕೂಡಲಸಂಗಮದೇವಾ. ॥೨೮॥

೨೭೩

ಹಸ್ತಕಡಗ ಕೈಗಧಿಕ ನೋಡಾ :
ಕೊಡಲಹುದು ಕೊಳಲಾಗದು.
ಬಾಹು ಬಳೆ ತೋಳಿಂಗಧಿಕ ನೋಡಾ :
ಪರವಧುವನಪ್ಪಲಾಗದು.
ಕರ್ಣಕುಂಡಲ ಕಿವಿಗಧಿಕ ನೋಡಾ :
ಶಿವನಿಂದೆಯು ಕೇಳಲಾಗದು.
ಕಂಠಮಾಲೆ ಕೊರಳಿಂಗಧಿಕ ನೋಡಾ :
ಅನ್ಯದೈವಕ್ಕೆ ತಲೆವಾಗಲಾಗದು.
ಆಗಳೂ ನಿಮ್ಮುಮ್ಮವ ನೆನದು, ಕೂಡಲಸಂಗಮದೇವಾ
ನಿಮ್ಮುಮ್ಮವನೆ ಪೂಜಿಸಿ, ಸದಾಸನ್ನಿಹಿತನಾಗಿಪ್ಪನು
ಲಿಂಗಶಿಖಾಮಣಿಯಯ್ಯಾ. ॥೨೧॥

೨೭೪

ನೆಲನೊಂದೆ ಹೊಲೆಗೇರಿ ಶಿವಾಲಯಕ್ಕೆ
ಜಲವೊಂದೆ ಶೌಚಾಚಮನಕ್ಕೆ
ಕುಲವೊಂದೆ ತನ್ನತಾನರಿದವಂಗೆ
ಫಲವೊಂದೆ ಷಡ್ದರ್ಶನ ಮುಕ್ತಿಗೆ
ನಿಲವೊಂದೆ, ಕೂಡಲಸಂಗಮದೇವಾ ನಿಮ್ಮನರಿದವಂಗೆ. ॥೨೨॥

೨೭೫

ಉಂಬ ಬಟ್ಟಲು ಬೇರೆ ಕಂಚಲ್ಲ
ನೋಡುವ ದರ್ಪಣ ಬೇರೆ ಕಂಚಲ್ಲ; ಭಾಂಡ ಒಂದೆ
ಬೆಳಗೆ ಕನ್ನಡಿ ಯೆನಿಸಿತ್ತಯ್ಯಾ.
ಅರಿದರೆ ಶರಣ, ಮರೆದರೆ ಮಾನವ
ಮರೆಯದೆ ಪೂಜಿಸು ನಮ್ಮ ಕೂಡಲಸಂಗಮದೇವನ. ॥೨೩॥

೨೭೬

ಪುಣ್ಯಪಾಪವೆಂಬ ಉಭಯ ಕರ್ಮವನಾರು ಬಲ್ಲರಯ್ಯಾ ?
ಇವನಾರುಂಬರು ? ಕಾಯ ಉಂಬರೆ ಕಾಯ ಮಣ್ಣು.
ಜೀವತಾನುಂಬರೆ ಜೀವತಾ ಬಯಲು.
ಉಭಯದ ನಿರ್ಣಯವ, ಕೂಡಲಸಂಗಮದೇವಾ
ನಿಮ್ಮ ಶರಣ ಬಲ್ಲ. ॥೨೪॥

೨೭೭

ಆಚಾರಲಿಂಗವಿಡಿದು ಅನುಭಾವಲಿಂಗಸಿದ್ಧಿ
ಅನುಭಾವಲಿಂಗವಿಡಿದು ಮಾರ್ಗಕ್ರಿಯಾಲಿಂಗಸಿದ್ಧಿ
ಮಾರ್ಗಕ್ರಿಯಾಲಿಂಗವಿಡಿದು ಮೀರಿದಕ್ರಿಯಾಲಿಂಗಸಿದ್ಧಿ
ಮೀರಿದಕ್ರಿಯಾಲಿಂಗವಿಡಿದು ಕ್ರಿಯಾನಿಷ್ಪತ್ತಿಲಿಂಗಸಿದ್ಧಿ.
ಇದು ಕಾರಣ, ಕೂಡಲಸಂಗಮದೇವ ಲಿಂಗವಿಡಿದು ಲಿಂಗಸಿದ್ಧಿ. ॥೨೫॥

೨೭೮

ಪರಶಿವನಿಂದಾದ ಶಕ್ತಿ, ಶಕ್ತಿಯಿಂದಾದ ಲಿಂಗೋದ್ಭವ,
ಲಿಂಗದಿಂದಾದ ಶಿವಮೂರ್ತಿ,
ಆ ಶಿವಮೂರ್ತಿಮುಖದಿಂದಾದ ಲೋಕ,
ಆ ಲೋಕದಿಂದಾದ ವೇದಾಗಮ, ವಿದ್ಯಾಪ್ರಕರಣ,
ಆ ವೇದಾಗಮ ವಿದ್ಯಾಪ್ರಕರಣದಿಂದಾದ ಗುರು
ಇದು ನಿಷ್ಪತ್ತಿ ಷಟ್‌ಸ್ಥಲ.
ಗುರುವಿಂದಾದ ದೀಕ್ಷೆ, ದೀಕ್ಷೆಯಿಂದಾದ ನಿಯಮ.
ನಿಯಮದಿಂದಾದ ಭಕ್ತಿ, ಇಂತೀ ಸಕಲ ಷಟ್‌ಸ್ಥಲ.
ಭಕ್ತಿಯಿಂದಾದ ಮನ, ಮನದಿಂದಾದ ಮತಿ
ಮತಿಯಿಂದಾದ ಅಭ್ಯಾಸ, ಅಭ್ಯಾಸದಿಂದಾದ ಧನ.
ಧನದಿಂದಾದ ತನು, ತನುವಿಂದಾದ ಮೋಹ
ಇಂತೀ ಸಾಧಕ ಷಟ್‌ಸ್ಥಲ,
ಮೋಹದಿಂದಾದ ಯುಕ್ತಿ, ಯುಕ್ತಿಯಿಂದಾದ ಭಾವಶುದ್ಧಿ.
ಭಾವಶುದ್ಧಿಯಿಂದಾದ ನಿರಾಲಸ್ಯ,
ನಿರಾಲಸ್ಯದಿಂದಾದ ನಿರೂಪ, ನಿರೂಪದಿಂದಾದ ನಿರೂಪಾಧಿಕ,

ನಿರೂಪಾಧಿಕದಿಂದಾದ ಐಕ್ಯ
ಇಂತೀ ಸಕಲ [ಷಟ್‌ಸ್ಥಲ]
ಐಕ್ಯದಿಂದಾದ ಶರಣ, ಶರಣನಿಂದಾದ ಪ್ರಾಣಲಿಂಗಿ,
ಪ್ರಾಣಲಿಂಗಿಯಿಂದಾದ ಪ್ರಸಾದಿ, ಪ್ರಸಾದಿಯಿಂದಾದ ಮಾಹೇಶ್ವರ,
ಮಾಹೇಶ್ವರನಿಂದಾದ ಭಕ್ತ,
ಇಂತು ಶಿವಸಾಧಕ ಷಟ್‌ಸ್ಥಲ.
ಇಂತು ಶಂಭುಸೊಡ್ಡಳನ ಮಹಾಮಹಿಮೆಯು
ಮೂವತ್ತಾರುತತ್ವ ಕುಳಸ್ಥಳವರಿದು
ನಮ್ಮ ಶರಣಂಗೆ ಇದೆ ಮಾರ್ಗ.
ಈ ಮಾರ್ಗದಲ್ಲಿ ನಡೆವ ಶರಣಂಗೆ ನಾನು ನಮೋ ನಮೋ ಎಂಬೆನು.
॥೨೬॥

೨೭

ಸಿರಿ ದಾರಿದ್ರ್ಯವೆಂಬ ಶಂಕೆಯುಂಟೆ ಸತ್ಯಶರಣಂಗೆ ?
ಉರಿಬರಲಿ ಸಿರಿಬರಲಿ ಸರಿಸಮಾನ,
ಶಿರವರಿದು ಧರೆಯಲ್ಲಿ ಬಿದ್ದರೂ
ನಾಲಗೆ ನಮೋ ನಮೋ ಎನಬೇಕು ಹರಶರಣಂಗೆ.
ಮರವೆ ಬಂದರೇನು ? ಅರಿವನಂಡಲೆಯಲರಿಯದು,
ಅಮಲೇಶ್ವರಲಿಂಗವನರಿತ ಶರಣಂಗೆ ಮರವೆಯಿಲ್ಲ. ॥೨೭॥

೨೮

ಕಾಯಶೂನ್ಯ, ಜೀವಶೂನ್ಯ, ಪ್ರಾಣಶೂನ್ಯವೆಂದೆಂಬರು,
ಅದೆಂತಯ್ಯ ?
ಮನ ಮನನ ಮನನೀಯಂಗಳಲ್ಲಿ
ಮಂತ್ರಲೀಯವಾದುದೆ ಕಾಯಶೂನ್ಯ.
ಆ ಮಂತ್ರಪಿಂಡಾಡದಲ್ಲಿ ಪರಿಪೂರ್ಣ ಭೇದದೋರಿದಾಗಲೆ ಜೀವಶೂನ್ಯ
ಆ ಪ್ರಭೆಯು ಪರಿಣಾಮದಲ್ಲಿ ಜೀವನ ಉಪಾಧಿ ನಷ್ಟವಾಗಿ
ಜೀವಪರಮ ಸಂಯೋಗವೆಂಬ ಸಂದೇಹವಳಿದಾಗಲೆ ಪ್ರಾಣಶೂನ್ಯ.
ಇದು ತ್ರಿವಿಧಶೂನ್ಯ ಐಘಟದೂರ ರಾಮೇಶ್ವರಲಿಂಗದಲ್ಲಿ ನಿಲುಕಡೆ.
॥೨೮॥

●

೨೮೧

ಮದವಣಿಗನಿಲ್ಲದೆ ನಿಬ್ಬಣ ಮೀರುವುದೆ ಅಯ್ಯಾ.
ಕೋಗಿಲೆಗಳಿಲ್ಲದೆ ವಸಂತವನಂಗಳೊಪ್ಪುವವೆ ಅಯ್ಯಾ.
ತಾವರೆಗಳಿಲ್ಲದೆ ಕೊಣಂಗಳೊಪ್ಪುವವೆ ಅಯ್ಯಾ.
ಪತಿಯಿಲ್ಲದ ಸತಿಗೆ ಸಂತೋಷವಹುದೆ ಅಯ್ಯಾ.
ಆಧಾರವಿಲ್ಲದ ಸೂತ್ರವ ಮೆಟ್ಟಿ ನಡೆಯಲಹುದೆ ಅಯ್ಯಾ
ಹೂಳಿದ ನಿಧಾನವ ಅಂಜನವಿಲ್ಲದೆ ಕಾಣಬಹುದೆ [ಅಯ್ಯಾ].
ಎನಗೆನ್ನ ಮಡಿವಾಳದೇವನಿಲ್ಲದೆ ಒಪ್ಪದೆಂದು
ಕೂಡಲಚೆನ್ನಸಂಗಮದೇವರ್ಸು ಬಿನ್ನಹವಂ ಮಾಡಿ
ಕಳುಹಿದರೆಂದು ಹೇಳಯ್ಯ, ಪಡಿಹಾರಿ ಉತ್ತಣ್ಣ.

(ಪ. ೧೬೨ರ ನಂತರ)

೨೮೨

ಗುರುಹಿರಿಯರ ದರ್ಶನ ನಯನಕ್ಕೆ ಚೆಲುವು.
ಸತ್ಪಾತ್ರಕ್ಕೀವುದು ಹಸ್ತಕ್ಕೆ ಚೆಂದ.
ಸತ್ಯವ ನುಡುವುದು ವಾಕ್ಯಕ್ಕೆ ಭೂಷಣ.
ಶಿವ ಸ್ತುತಿ ಕರ್ಣಕ್ಕೆ ಅಲಂಕಾರ.
ಶರಣರ ಕೂಡಣ ಸಂಭಾಷಣೆ ಪ್ರಾಣಕ್ಕೆ ಶೃಂಗಾರ.
ಇಂತಿವಿಲ್ಲದ ನರನ ಬಾಳುವೆ
ಹೊಲೆಜೋಗಿಯ ಕೈಯ ಒಡಕುಪಾತ್ರೆಗಿಂದ ಕಡೆ!
ನಿಃಕಳಂಕಮಲ್ಲಿಕಾರ್ಜುನ.

# ಪ್ರಭುಲಿಂಗದ ಕಂದ

---

೨೮೩

ಹೃದಯಕಮಲದಷ್ಟದಳದ ದ್ವಾತ್ರಿಂಶ ಕುಸುಮ
ಮಧ್ಯದಲ್ಲಿಪ್ಪನಾಸೂರ್ಯನು.
ಆ ಸೂರ್ಯನ ಮಧ್ಯದಲ್ಲಿಪ್ಪನಾ ಚಂದ್ರನು.
ಆ ಚಂದ್ರನ ಮಧ್ಯದಲ್ಲಿಪ್ಪನಾ ಅಗ್ನಿ.
ಆ ಅಗ್ನಿಯ ಮಧ್ಯದಲ್ಲಿಪ್ಪುದಾ ಕಾಂತಿ.
ಆ ಕಾಂತಿಯ ಮಧ್ಯದಲ್ಲಿಪ್ಪುದು ಸುಜ್ಞಾನ.
ಆ ಸುಜ್ಞಾನದ ಮಧ್ಯದಲ್ಲಿಪ್ಪುದಾ ಚಿದಾತ್ಮ.
ಆ ಚಿದಾತ್ಮನ ಮಧ್ಯದಲ್ಲಿಪ್ಪನಾ ಚಿತ್ಪ್ರಕಾಶಸ್ವರೂಪನಪ್ಪ ಪರಶಿವನು.
ಅಂತಪ್ಪ ಪರಶಿವನು ಎನ್ನ ಸುಜ್ಞಾನಕಾಯದ
ಮಸ್ತಕದ ಮೇಲೆ ಹಸ್ತವನಿರಿಸಿ,
ಮನಭಾವ ಕರಣೇಂದ್ರಿಯಂಗಳಿಂ ಸ್ವರೂಪೀಕರಿಸಿ,
ದೃಷ್ಟಿಗೆ ತೋರಿ ಕೈಯಲ್ಲಿ ಲಿಂಗವ ಕೊಟ್ಟ
ಚೆನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂದು
ಬದುಕಿದೆನಯ್ಯಾ ಪ್ರಭುವೆ ಕಪಿಲಸಿದ್ಧಮಲ್ಲಿಕಾರ್ಜುನಾ.॥

---

'ಪ್ರಭುಲಿಂಗದ ಕಂದ' ೩ನೆಯ ಪದ್ಯದ ಟೀಕೆಯ ವಿವರಣೆಗೆ ತಾತ್ಪರ್ಯ ಎಂದು ಈ ವಚನವನ್ನು ಹೇಳಲಾಗಿದೆ.

●

೨೮೪

ಜಾತಿ ಬ್ರಾಹ್ಮಣಂಗೆ ಕರಸ್ಥಲದಲ್ಲಿ ಲಿಂಗ,
ಉರಸ್ಥಲದಲ್ಲಿ ರುದ್ರಾಕ್ಷಿಮಾಲೆ, ಉಪನಯನ ನೊಸಲು ಕಣ್ಣು,
ಕಾವಿಯ ಧೋತ್ರ, ಗಾಯತ್ರಿಮಂತ್ರ
ಪುರುಷಪ್ರಮಾಣದ ದಂಡ, ಭವತಿಭಿಕ್ಷಾಂದೇಹಿಯೆಂದು
ಪರಬ್ರಹ್ಮವನಾಚರಿಸಿಕೊಂಡಿಪ್ಪಾತನೆ ಬ್ರಾಹ್ಮಣ.
ಇಂತಲ್ಲದೆ ಮಿಕ್ಕವರೆಲ್ಲ ಶಾಪಹತ ವಿಪ್ರರು ನೀವು ಕೇಳಿರೊ
ಕೃತಯುಗ ಮೂವತ್ನಾಲ್ಕು ಲಕ್ಷದ ಐವತ್ಮೂರು ಸಾವಿರ
ವರುಷಂಗಳಲ್ಲಿ
ಗಜಾಸುರನೆಂಬ ಆನೆಯ ಕೊಂದು
ಹೋಮಕ್ಕಿಕ್ಕಿ ಮಾಂಸವ ತಿನ್ನಹೇಳಿತ್ತೇ ವೇದ ?
ಅಹುದು ತಿನ್ನ ಹೇಳಿತ್ತು. ಅದೆಂತೆಂದಡೆ :
ಕುಲಚಲಯೌವನ ರೂಪು ವಿದ್ಯಾ ರಾಜ್ಯ ತಪವೆಂಬ
ಅಷ್ಟಮದಂಗಳ ಕೊಲ್ಲ ಹೇಳಿತ್ತಲ್ಲದೆ
ಆನೆಯ ತಿಂಬ ಹೀನ ಹೊಲೆಯರ ಮುಖವ ನೋಡಲಾಗದು.
ತ್ರೇತಾಯುಗದ ಹದಿನೇಳುಲಕ್ಷದ ಇಪ್ಪತ್ತೆಂಟು ಸಾವಿರ ವರುಷಂಗಳಲ್ಲಿ
ಅಶ್ವನೆಂಬ ಕುದುರೆಯ ಕೊಂದು ಹೋಮಕಿಕ್ಕಿ
ಮಾಂಸವ ತಿನ್ನ ಹೇಳಿತ್ತೇ ವೇದ ?
ಅಹುದು ತಿನ್ನ ಹೇಳಿತ್ತು ವೇದ. ಅದೆಂತೆಂದಡೆ:
ಪ್ರಾಣ ವ್ಯಾನ ಅಪಾನ ಉದಾನ ಸಮಾನ ನಾಗ ಕೂರ್ಮ ಕೃಕರ
ದೇವತ್ತ ಧನಂಜಯವೆಂಬ ಕುದುರೆಯ ಕೊಂದು
ತಿನ್ನ ಹೇಳಿತ್ತಲ್ಲದೆ, ಕುದುರೆಯ ತಿಂಬ
ಜಿನುಗು ಹೊಲೆಯರ ಮುಖವಂ ನೋಡಲಾಗದು
ದ್ವಾಪರ ಎಂಟು ಲಕ್ಷದ ಐವತ್ನಾಲ್ಕು ಸಾವಿರ ವರುಷಂಗಳಲ್ಲಿ
ಮಹಿಷಾಸುರನೆಂಬ ಕೋಣನ ಕೊಂದು ಹೋಮಕ್ಕಿಕ್ಕಿ
ಮಾಂಸವ ತಿನ್ನ ಹೇಳಿತ್ತೇ ವೇದ ?
ಆಹುದು ತಿನ್ನ ಹೇಳಿತ್ತು. ಅದೆಂತೆಂದಡೆ:
ಜಾತಿ ವರ್ಣ ಆಶ್ರಮ ಕುಲಗೋತ್ರ ನಾಮವೆಂಬ
ಕೋಣನ ಕೊಲ್ಲ ಹೇಳಿತ್ತಲ್ಲದೆ, ಕೋಣನ ತಿಂಬ

ಕುನ್ನಿ ಹೊಲೆಯರ ಮುಖವ ನೋಡಲಾಗದು.
ಕಲಿಯುಗದ ನಾಲ್ಕುಲಕ್ಷ ಮೂವತ್ತೆರಡುಸಾವಿರ ವರುಷಂಗಳಲ್ಲಿ
ಮಾಂಸವ ತಿನ್ನ ಹೇಳಿತ್ತೇ ವೇದ ?
ಅಹುದು ತಿನ್ನ ಹೇಳಿತ್ತು, ಅದೆಂತೆಂದಡೆ:
ಮನ ಬುದ್ಧಿ ಚಿತ್ತ ಅಹಂಕಾರವೆಂಬ
ಹೋತನ ಕೊಲ್ಲ ಹೇಳಿತ್ತಲ್ಲದೆ,
ಹೋತನ ಕೊಂದು ತಿಂಬ ಹೊಲೆಯರ ಮುಖವ ನೋಡಲಾಗದು.
ಇಂತೀ ನಾಲ್ಕು ಯುಗದಲ್ಲಿ ಮಾಂಸವ ತಿಂಬ
ಅನಾಚಾರಿ ಹೊಲೆಯರ ಮುಖವಂ ನೋಡಲಾಗದು.
ಅಜಂಗೆ ದ್ವಿಜನೆ ಗುರು. ದ್ವಿಜಂಗೆ ಹರಿಯೆ ಗುರು.
ಹರಿ ಹರಿಣಾವತಾರವಾದಲ್ಲಿ ಎರಳೆಯ ತಿಂಬುದಾವಾಚಾರ ?
ಹರಿ ಮತ್ಸ್ಯಾವತಾರವಾದಲ್ಲಿ ಮೀನ ತಿಂಬುದಾವಾಚಾರ ?
ಇಂತೀ ಹೊನ್ನಗೋವ ತಿಂಬ ಕುನ್ನಿಗಳ ತೋರದಿರಾ
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ. ॥೧॥

೨೮೬

ಕರ್ಮದಿಂದ ಬೊಮ್ಮದಿಂದ ಪುತ್ರರಿಂದ ಗೋತ್ರದಿಂದ
ಕಳತ್ರಯರಿಂದ ಗತಿಯಾಗದೆಂದು ಸಾರಿತ್ತು ಯಜುರ್ವೇದ.
ಉಪಾಧಿಯ ಬಿಟ್ಟು ನಿರುಪಾಧಿಕನಾಗಿ
ಲಿಂಗವನಾರಾಧಿಸಿ ನಿತ್ಯರಾದರೆಂದು ಸಾರಿತ್ತು ಯಜುರ್ವೇದ.
'ಓಂನಮಃ ಕರ್ಮಣಾನ ಪ್ರಜಾಯಾನದಾನೇನ ತ್ಯಾನೇನೈನತೇನ
ಅಮೃತತ್ವಮಾನಶೂ' ಎಂಬುದು ಶ್ರುತಿ ವಾಕ್ಯಂ.
ಈ ಪರಿಯಲಿ ವೇದ ಹೊಗಳಲ್ಕೆ
ಎಮ್ಮ ಪುರಾತನರು ನಡದರು, ನಡದು ಮೆರೆಯಿತ್ತ ಕಂಡು ನಂಬರು
ಬಸವಪ್ರಿಯ ಕೂಡಲಚನ್ನಸಂಗಯ್ಯ. ॥೨॥

೨೮೭

ಸಾಮವೇದಿಗಳು ಶ್ವಪಚಯ್ಯಗಳ ಹಸ್ತದಲ್ಲಿ ಗುರುಕಾರುಣ್ಯವ ಪಡೆದು
ಅವರೊಕ್ಕುದಕೊಂಡು ಕೃತಾರ್ಥರಾದಂದು.
ಎಲೆ ವಿಪ್ರರಿರಾ ನಿಮ್ಮ ಕುಲಂಗಳೆಲ್ಲಿಗೆ ಹೋದವು ?
ಕೆಂಭಾವಿ ಭೋಗಯ್ಯ[ಗಳ] ಗಮನವ ಶಿವನಂದು ನೋಡಲೆಂದು

ಅನಾಮಿಕ ವೇಷವ ಧರಿಸಿ ಬರಲು
ಅವರನಾರಾಧಿಸಲು ಭೋಗತಂದೆಗಳ ನೆರದ ದ್ವಿಜರೆಲ್ಲರು
ಪುರದಿಂದ ಪೊರಮಡಿಸಲು
ಪುರದ ಲಿಂಗಗಳೆಲ್ಲವು ಬೆನ್ನಲುರುಳುತ್ತ ಪೋಗಲು,
ಮರುಳ ವಿಪ್ರರೆಲ್ಲರು ಬೆರಳ ಕಚ್ಚಿ ತ್ರಾಹಿ ತ್ರಾಹಿ
ಕರುಣಾಕರ ಮೂರ್ತಿಯೆಂದು
ಶರಣುಹೊಕ್ಕು ಮರಳಿ ಬಿಜಯಂಗೈಸಿಕೊಂಡು ಬಾಹಂದು
ನಿಮ್ಮ ಕುಲಾಭಿಮಾನವೆಲ್ಲಿಗೆ ಹೋದವು ಹೇಳಿರೆ ?
ಈಶನೊಲಿದು ಚನ್ನಯ್ಯಗಳ ಏಕೋನಿಷ್ಠೆಯ
ಸ್ಥಾನದಾನ ಸಮರ್ಪಣಭಾವ ಬಲಿದು
ಅಭವ ಪ್ರತ್ಯಕ್ಷನಾಗಿ ಕೈದುಡುಕಿ ಸಹಭೋಜನವ ಮಾಡುವಂದು
ನಿಮ್ಮ ವೇದಾಗಮ ಶ್ರುತಿಮಾರ್ಗದಾಚಾರವೆಲ್ಲಿಗೆ ಹೋದವು ಹೇಳಿರೆ?
ಬೊಬ್ಬೂರಲ್ಲಿ ಬಿಬ್ಬ ಬಾಚಯ್ಯಗಳು ಹರನ ಗಣಂಗಳ ನೆರಹಿ
ಪರಮಾನಂದದಿಂ ಗಣಪರ್ವವಂ ಮಾಡಿ
ಗಣಪ್ರಸಾದಮಂ ಪುರದವೀಥಿಗಳೊಳು ಮೆರೆಸುತ್ತ ಬರಲು
ನೆರೆದ ವಿಪ್ರರೆಲ್ಲರು ಉಚ್ಛಿಷ್ಟ ಚಾಂಡಾಲವೆಂದು ದೂಷಿಸಿ
ಬಂಡಿಯಂ ಮುರಿದು ತಂಡ ತಂಡದ ಭಕ್ತರನೆಲ್ಲನವಗಡಿಸುತ್ತಿರಲು
ಹರಹರ ಮಹಾದೇವ ಮಹಾಪ್ರಸಾದ ಪರಂಜ್ಯೋತಿಯೆಂದು
ಪ್ರಸಾದಮಂ ಕೈಯೆತ್ತಿ ಸೂಸಲು
ಪುರವೆಲ್ಲ ಬೆಂದು ಗಡ್ಡದ ಜನರೆಲ್ಲರು ಘರಿಘರಿಲನೆ
ಉರಿದು ಕರಿಯಾಗಲು,
ಉಳಿದ ವಿಪ್ರರೆಲ್ಲರೂ ತ್ರಾಹಿ ತ್ರಾಹಿ ಶರಣಾಗತ ರಕ್ಷಕರಿರಾ
ಒಮ್ಮೆಗೆ ಕಾವುದೆಂದು ಧರೆಯೊಳು ಬಿದ್ದು ಬೆರಳಕಚ್ಚುವಂದು
ಅಂದು ನಿಮ್ಮ ಆಗಮಾರ್ಥದ ಕುಲಾಚಾರ
ಮಾರ್ಗವೆಲ್ಲಿಗೆ ಹೋದವು ಹೇಳಿರೆ ?
ಸಾಕ್ಷಿ :
ಸ್ತ್ರೀ ವಾಚಪುರುಷಃ ಷಂಡಃಶ್ಚಾಂಡಾಲೋ ದ್ವಿಜವಂಶಜಃ ।
ನ ಜಾತಿ ಭೇದೋ ಲಿಂಗಾರ್ಚೇ ಸರ್ವೇರುದ್ರಗಣಾಃ ಸ್ಮೃತಾಃ ॥
ಇದು ಕಾರಣ, ಶರಣರಿಗೆ ಪ್ರತಿಯಿಲ್ಲ
ಬೆರಳನೆತ್ತದೆ ಇಕ್ಕಿದ ಮುಂಡಿಗೆಯ ಸಾಸರ್ವರೆತ್ತಿಕೊಳ್ಳರೆ ದ್ವಿಜರು
ಬಸವಪ್ರಿಯ ಕೂಡಲ ಚನ್ನಸಂಗಯ್ಯನೊಬ್ಬನೆಂದು. ॥೩॥

೨೮೮

ವೇದವೆಂಬ ಅಂಜನವ ನೆಚ್ಚಿಕೊಂಡು
ಶಿವನೆಂಬ ನಿಧಾನವ ಕಾಣಲರಿಯರೀದ್ವಿಜರು
ನರಗುರಿಗಳೆತ್ತ ಬಲ್ಲರು ಹೇಳಾ ?
ಯಜುರ್ವೇದಃ ತದ್ವಿಷ್ಣೋಃ ಪರಮಂ ಪದಂ ಸದಾವಶ್ಯತ್ರಿಶೂರಾಯ
ಜ್ವಾಲಾಯನಮಃ ಜ್ವಾಲಲಿಂಗಾಯ ನಮಃ
ಶ್ರೀ ರುದ್ರಭಾಷ್ಯೇ: ಉತ್ತಮ ವೇದಭೂಷಿಕೊ ದೇವೋತ್ತುಮಾಧ್ಯಂ
ಪ್ರಜವನಮಾಲಂಕೃತಂ ಜಗತ್ಕಾರಣತ್ವೇ ನ ಜಾ
ನಯಾಮಸಃ ಶಿವಸಂಕಲ್ಪೋಪನಿಷಧಿ
ಪರಾತ್ಪರತರೋ ಬ್ರಹ್ಮ ಪರಾತ್ಪರತರೋಹರಿಃ
ಯತ್ಪರಾತ್ಪರತರೋರೀಶಂ ತನ್ಮೇಮನಃ ಶಿವಸಂಕಲ್ಪಮಸ್ತು–
ಇಂತೆಂದುದಾಗಿ, ಇದು ಕಾರಣ, ಪಾಪಿಂಗೆ ಪರಮಗತಿಯಾಕೊ
ಕುರುಡಗೆ ಕನ್ನಡಿಯಾಕೊ
ಶಿವನ ನಿಜತತ್ವವ್ಯಾಕೊ ದ್ವಿಜರೆಂಬ ಅರೆಮರುಳುಗಳಿಗೆ ?
ಬಸವಪ್ರಿಯ ಕೂಡಲಚನ್ನಸಂಗಮದೇವಯ್ಯ ॥೪॥

೨೮೯

ಮಿಂಚುಹುಳುವೊಂದು ಒಮ್ಮೆ
ಪ್ರಚಂಡತೇಜೋಮಯ ಸೂರ್ಯಂಗೆ ಸರಿಯಾದಂದು
ಹರಿ ಹರಂಗೆ ಸರಿಯಹನು.
ಕಹಿಬೇವಿನ ಕೊರಡು ಬಾವನ್ನ ಶ್ರೀಗಂಧಕ್ಕೆ ಸರಿಯಾದಂದು
ವಿರಿಂಚಿ ಗಿರೀಶಂಗೆ ಸರಿಯಹನು.
ಅಜ್ಞಾನವು ಸುಜ್ಞಾನಕ್ಕೆ ಸರಿಯಾದಂದು
ವಜ್ರಪಾಣಿ ಮೊದಲಾದ ದೇವದಾನವ ಮಾನವರು
ಶೂಲಪಾಣಿಗೆ ಸರಿಯಹರು.
ಏನ ಹೇಳುವೆ ಅಜ್ಞಾನಿ ಜನರ ಅಜ್ಞಾನಪ್ರಬಲ ಚೇಷ್ಟೆಯನು ?
ಖದ್ಯೋತೋಯದಿ ಚಂಡಭಾನು ಸದೃಶಸ್ತುಲ್ಯೋ ಹರಿಃ ಶಂಭುನಾ
ಕಿಂ ಕಾಷ್ಠಂ ಹರಿಚಂದನೇನ ಸದೃಶಂ ತುಲ್ಯೋಹಮೀಶೇನ ಚಃ
ಅಜ್ಞಾನಂ ಯದಿ ವೇದನೇನ ಸದೃಶಂ ದೇವೇನ ತುಲ್ಯೋ ಜನಾ
ಕಿಂ ವಕ್ಷೇ ಸುರಪುಂಗವಾ ಅಹಮಹೋ ಮೋಹಸ್ಯ ದುಶ್ಚೇಷ್ಟಿತಂ-

ಇಂತೆಂದು, ಬ್ರಹ್ಮನೀತಿಯಲ್ಲಿ ಬ್ರಹ್ಮ ನುಡಿಯಲು,
ನಿಮಗೆ ಸರಿಯೆಂಬವರಿಗೆ ನರಕವೇ ಗತಿ
ಬಸವಪ್ರಿಯ ಕೂಡಲಚೆನ್ನಸಂಗಮದೇವಾ. ॥೫೨॥

೯೦

ಬಿಡಿ ಬಿಡಿ ವಿಷ್ಣುವ ನಿಮಗೆ ಗತಿಗೆ ಸಾಧನವಲ್ಲ
ಕಂಡಿರೆ ಎಲೆ ದ್ವಿಜರಿರಾ.
ಬಿಡದೆ ಧ್ಯಾನಿಸಿ ಶಿವನ ಅಡಿದಾವರೆಯ
ಬಿಡದೆ ಪೂಜಿಸಿ ಶಿವನ ಶ್ರೀಪಾದ ಪದ್ಮಂಗಳ
ನಿಮಗೆ ತಡೆಯಿಲ್ಲದ ಮುಕ್ತಿದೊರಕೊಂಬದು.
ಅಥರ್ವಣವೇದ: ಈಶಾನ್ ಶಿವ ಏಕೋಧ್ಯಾಯ
ಶಿವಕರತ್ಸರ್ವ ಮನ್ಯತ್ಪರಿತ್ಯಜ್ಯ,
ಇತಿ ಬ್ರಹ್ಮನೀತಿಯಲಿ: ಅತಃ ಸರ್ವಂ ಪರಿತ್ಯಜ್ಯ
ಶಿವಾದನ್ಯಂತು ದೈವತಂ ತಮೇವ
ಶರಣಂಗಚೇತ್ಸದ್ಯೋಮುಕ್ತಿಂ ಸಗಚ್ಛತಿ.
ಕೆಡಬೇಡ ಸಾರಿ ಡಂಗುರ ಹೊಯಿತ್ತು, ಶ್ರುತಿಯ ನೋಡಯ್ಯ.
ಬಸವಪ್ರಿಯ ಕೂಡಲಚೆನ್ನಸಂಗಯ್ಯನನೆ ಬಿಡದೆ
ಧ್ಯಾನ ಪೂಜೆಯ ಮಾಡಲು
ಕೊಡುವ ನಿಮಗೆ ಪರಮಪದವನು. ॥೬೦॥

೯೧

ಒಂದು ಎರಡಹುದೆ ? ಒಂದು ಒಂದೇ, ಎರಡು ಎರಡೇ.
ಅದು ಕಾರಣ, ಶಿವನು ತನ್ನ ಲೀಲಾಕಾರಣವಾಗಿ
ಮಾಯಾನಿರ್ಮಿತವಂ ಮಾಡಿ, ಆ ಮಾಯಾರಚನೆಯಿಂದಾದ
ಬ್ರಹ್ಮಾಂಡಸಂದೋಹ, ಹರಿ ವಿರಿಂಚಿ ಸುರಪತಿ
ಸುರಾಸುರರು ನರನಾರಿ, ಖಗಮೃಗಜೀವರಾಶಿಗಳೆಲ್ಲವೂ ಶಿವನಿಂದಲಾಗಿ
ಶಿವನಿಂದ ಹೊರೆಯಿಸಿಕೊಂಡು, ಶಿವನಿಂದ ಹೋದವೆಂದಡೆ,
ಅವರ ಆಗು ಹೋಗು ಇರವು ಹೋಗಿನೊಳಗೆ,
ಲಯ ಗಮನ ಸ್ಥಿತಿ ಶಿವಂಗುಂಟೆ ಎಲೆ ಮರುಳುಗಳಿರಾ ?
ಗಗನದಲ್ಲಿ ತೋರಿದ ಮೇಘವು ಗಗನದಲ್ಲಿ ಅಡಗಿದವೆಂದಡೆ,
ಆ ಗಗನ ತಾ ಮೇಘವೆ ? ತನ್ನಾಧೀನ ಶಕ್ತಿದಂಡದಿಂ

ಕುಂಬಾರ ಚಕ್ರವ ತಿರುಗಿಸಲು,
ಆ ಚಕ್ರಭ್ರಮಣ ಚೈತನ್ಯವು ಆ ಕುಂಬಾರನೆ ಮರುಗಳಿರಾ ?
ಆ ಚೈತನ್ಯ ತನ್ನಲ್ಲಡಗುವುದೆ ? ನಿಲ್ಲು ಮಾಣು.
ಬಿಲ್ಲನಾರಿಗೆ ಅಂಬ ಸಂಧಾನಿಸಿ ಎಸೆಯಲಾ ಅಂಬು
ಹರಿವ ಚೈತನ್ಯ ಬಿಲ್ಲುಕಾರನೆ ? ಅಲ್ಲ, ನಿಲ್ಲು ಮಾಣು.
ಇವೆಲ್ಲವು ಅಚೇತನಂಗಳು.
ಅಂತು ಸರ್ವವೆಲ್ಲವೂ ತೋರಿಯಡಗುವುದು.
ಸರ್ವೇಶ್ವರ ಸರ್ವಕರ್ತೃ ಸರ್ವಚೈತನ್ಯ ಸೂತ್ರ
ಯಂತ್ರವಾಹಕ ಶಿವನು,
ಸರ್ವದ ಲಯ ಗಮನ ಸ್ಥಿತಿ ತನಗುಂಟೆ ? [ಇಲ್ಲ]
ನಿಲ್ಲು, ಮಾಣಿರೆ ಎಲೆ ಜಡಜೀವಿಗಳಿರಾ.
ಗಗನದ ರವಿಕಿರಣದಿಂದ ಸಕಲರೂಪಿತ
ದ್ರವ್ಯ ಪ್ರದಾರ್ಥಂಗಳಲ್ಲಿ ಪ್ರತಿಪ್ರಭೆ ತೋರಲು,
ಆ ಪ್ರತಿಪ್ರಭೆಯ ಆಗುಹೋಗಿನ ಸ್ಥಿತಿಗತಿಯು
ಗಗನದ ಸೂರ್ಯಂಗುಂಟೆ ಎಲೆ ಜಡಜೀವಿಗಳಿರಾ ?
ಈ ಪರಿಯಲೆ ವಿಶ್ವಕ್ಕೆಲ್ಲವಕ್ಕು ತಾನಲ್ಲದೆ ತಾನಿಲ್ಲದೆ
ಪ್ರೇರಣ ಚೈತನ್ಯವೇ ವಿಶ್ವದ ನಯನ,
ವಿಶ್ವದ ಮುಖ, ವಿಶ್ವದ ಬಾಹು, ವಿಶ್ವದ ಚರಣ,
ಸ್ವರ್ಗ ಮರ್ತ್ಯ ಭುವನಾದ್ಯಂಗಳ ಮೂಲ ಚೈತನ್ಯ ಸೂತ್ರ.
ತಾನಲ್ಲದೆ ತಾನಿಲ್ಲದೆ ಆಡಿಸುವ ಸೂತ್ರಾತ್ಮ ತಾನಲ್ಲದೆ,
ಅವರಾಗು ಹೋಗು ತನಗುಂಟೆ ಎಲೆ ಭೂಸುರರಿರಾ ?
'ವಿಶ್ವತಶ್ಚಕ್ಷುರುತಃ ವಿಶ್ವತೋ ಮುಖ ವಿಶ್ವತೋ ಬಾಹುರುತುಃ
ವಿಶ್ವತಃ ಪಾತ್ ಸ ಬಾಹುಭ್ಯಾಂ ಸಂಪದ.
ತ್ರೈರ್ದ್ಯೆವಾ ಭೂಮಿ ಜನಯುನ್ ದೇವಾ ಏಕ' ಎನಲು.
'ಈಶಾನ ಶಿವ ಏಕೋಧ್ಯೇಯಃ ಶಿವಶಂಕರಂ
ತತ್ಸರ್ವಮನ್ಯತ್ ಪರಿತ್ಯಜ್ಯ' ಎನಲು,
'ಏಕ ಏವ ರುದ್ರೋ ನದ್ವಿತೀಯಾಯ ತಸ್ಥಂ' ಎನಲು,
ಶಿವನೊಬ್ಬನೆ: ಇಬ್ಬರಿಲ್ಲ.
'ನ ಯಥಾ ಕುರ್ಮಾಣಿ ರೋಮಾಣಿ ನ ಶೃಗಂ ನರಮಸ್ತಕೇ
ನ ಯಥಾಸ್ತಿ ವಿಯತ್ಪುಷ್ಪನಂ ತಥಾಸ್ತಿ ಪರಾತ್ಪರಃ-
ನಾಲ್ಕು ವೇದಂಗಳು ಬಿನ್ನವಿಸಿದವು ಕೇಳಿರೆ.

ಎಲೆ ವಿಪ್ರರಿರಾ ಇದನರಿದು,
ಬಸವಪ್ರಿಯ ಕೂಡಲಚನ್ನಸಂಗಯ್ಯನನೆ ಧ್ಯಾನಿಸಿ,
ನಿರೀಕ್ಷಿಸಿ, ಸ್ತುತಿಸಿ, ಯಜಿಸಿ ಕೃತಾರ್ಥರಾಗಿರೆ. ॥೭॥

೨೯೨

ಅತರ್ಕನ ತರ್ಕಮುಖದಲ್ಲಿ ಸಾಧಿಸಿಹೆನೆಂದಡೆ
ನಿಮ್ಮ ತರ್ಕಶಾಸ್ತ್ರಕೊಂಬುದೆ ಎಲೆ ತರ್ಕಿಗರಿರಾ?
ಅಪ್ರಮಾಣನನ ಪ್ರಮಾಣಿಸಿನೆಂದಡೆ
ನಿಮ್ಮ ಪ್ರಮಾಣೆಲ್ಲಿಗೆ ಬಹವೆಲೆ ಅಪ್ರಮಾಣ್ಯಕರಿರಾ ?
ವೇದವೇಧಿಸಲರಿಯದೆ ಚಕಿತ ಮಭಿದತ್ತೇ ಎನಲು
ಅಂಕೊನಾಸ್ತಿಮಹಂತಂಗೆ ನಿಮ್ಮ ವೇದಾಂತವೇಗುವವು
ಎಲೆ ವೇದಾಂತಿಗಳಿರಾ ?
ಕರ್ಮಾದಿ ರಹಿತ ನಿರ್ಮಾಯ ಶಿವಂಗೆ ನಿಮ್ಮ ಕರ್ಮಂಗಳೆಲ್ಲಿಗೆ
ನಿಲುಕುವುವು ಎಲೆ ಪ್ರಭಾತರಿರಾ ?
ಕಾಲಂಗೆ ಕಾಲ ಮಹಾಕಾಲ ಕಾಲಾತೀತ ಮಹಾದೇವಂಗೆ
ನಿಮ್ಮ ಕಾಲ ವೇದವೇಗುವವು ಎಲೆ ಭ್ರಾಂತರಿರಾ ?
'ಶಿವಂ ಪರಾತ್ಪರಂ ಸೂಕ್ಷ್ಮಂ ನಿತ್ಯಂ ಸರ್ವಗತಾಮವ್ಯಯಂ ಅನಿಂದಿತಂ
ಅನುಪಮಪ್ರಮೇಯಮನಾಮಯಂ ಶುದ್ಧಾತ್ವಾದ್ಧಿ ವಮುದಿಷಂ
ಪರಮಾರ್ಥಂ ಪರಾತ್ಪರಂ' ಇಂತೆಂದುದಾಗಿ, ದರುಶನವಾದಿಗಳೆಲ್ಲ
ದರುಶನ ಭ್ರಮೆಯ ಬಿಟ್ಟು ಹರುಷದಿಂದಾ ಭಜಿಸಿ ಬದುಕಿರೆ
ಬಸವಪ್ರಿಯ ಕೂಡಲಚನ್ನಸಂಗಯ್ಯನ. ॥೮॥

೨೯೩

ಅಷ್ಟತನುವಿನೊಳಗೊಂದು ತನುವಾಗಿ
ಜೀವಾತ್ಮನು ಪಾಶಬದ್ಧನು ಪಶು ಪಾರತಂತ್ರನು ಸ್ವತಂತ್ರವೆಲ್ಲಯದೊ?
ಸ್ವತಂತ್ರ ಶಿವನೊಬ್ಬನೆ.
ತನ್ನ ಇಲೀಲೆಯಿಂದಾಡಿಸುವ ಘೋರ ಸಂಸಾರ ಭವವಾರಿಧಿಯೊಳಗೆ
ರಾಟಾಳದ ಗುಂಡಿಗೆಯೊಳಗಣ ಜಲವ ತುಂಬುತ್ತ
ಕೆಡಹುತ್ತವಿರುಹವ್ಯೆಸಲ್ಲದೆ ತೆರಹಿಲ್ಲ.
ಪುಣ್ಯ ಪಾಪಂಗಳ ಮಾಡಿ ಸ್ವರ್ಗ ನರಕಂಗಳ ಭೋಗಿಸಿ
ಪರತಂತ್ರವಲ್ಲದೆ ಸ್ವತಂತ್ರವೆಲ್ಲಿಯದೊ.

ಪುನರ್ಜನ್ಮ ಪುನರ್ಮೃತ್ಯುಃ ಪುನಃ ಕ್ಲೇ ಪುನಃ ಪುನಃ
ಸಗರಸ್ಥ ಘಟನ್ಯಾಯೋ ನ ಕದಾಚಿದಪದ್ಯಶಃ
ಎಂದುದಾಗಿ, ಜೀವಾತ್ಮಂಗೆ ಪರಮಾತ್ಮತ್ವ ಸಲ್ಲದಾಗಿ
ಅಷ್ಟತನುವಿನೊಳಗೊಂದು ತನು ಕಾಣಭೋ ಎಲೆ ಅದ್ವೈತಿಗಳಿರಾ!
ಹುಟ್ಟುಕುರುಡನು ತನ್ನ ಹಿರಿಯಯ್ಯ ಹೆತ್ತಪ್ಪಂಗೆ
ಮುಖವೆಲ್ಲ ಕಣ್ಣೆಂದಡೆ ತನಗಾದ ಸಿದ್ಧಿಯಾವುದು.
ಆದಿ ಸಿದ್ಧಾಂತ ವೇದಾಂತ ಶಾಸ್ತ್ರವನೋದಿ ಕೇಳಿ ಹೇಳಿದಡೆ
ತನಗೇನು ಸಿದ್ಧಿಯಾದುದೆಲೆ ಆತ್ಮತತ್ತ್ವವಾದಿಗಳಿರ ಹೇಳಿರೆ ?
ಅಷ್ಟ ತನುಗಳೆಲ್ಲ ಪರತಂತ್ರವೆಂಬುದು ಶ್ರುತದೃಷ್ಟಾನು-
ಮಾನಸಂಗಳಿಂ ನಿಮ್ಮ ತಿಳುಪುವವೆ ?
ಆತ್ಮಾಂತರಾಣಿಪಶವಃ ಪರತಂತ್ರ ಭಾವಾಸ್ವತಸ್ವತಂತ್ರಃ
ಪಶುಪತೇ ಪಸುಧೇಶ್ವರಸ್ವಂ ಆತ್ಮಾನ ಮೌಷನಿಹದಾಪ್ರುವದಂತ್ಯ
ನಿಶಮಿಶಂ ಭವರಿತ ಮುಖ ಯೋರುಭಯಂ ಸ್ವಭಾವಾ-
ಇಂತೆಂದುದಾಗಿ, ಆತ್ಮಂಗೆ ಪಶುತ್ವವೆ ಸ್ವಭಾವ
ಶಿವಂಗೆ ಪತಿತ್ವವೆ ಸ್ವಭಾವ ಇದು ಶ್ರುತ.
ಇನ್ನು ದೃಷ್ಟವೆಂತೆನಲು,
ಜೀವ ಶಿವೋ ಜೀವಸ್ಯಾ ಜೀವ್ಯ. ಶಿವನೆ ಶಿವನು ಶಿವನೆ ಜೀವನು.
ಬರಿದೆ ಶಿವನೆಂದು ನುಡಿವರು ಮೇಲಣ ಪದಾರ್ಥವ ನುಡಿಯರು.
ಪಾಷಬದ್ಧೋ ಪಶುಪ್ರೋಕ್ತರೆ ಪಾಷಾಮುಸುಕ್ತಂ ಪರಶಿವಃ
ಎಂಬ ಪದಾರ್ಥವ ನುಡಿಯರು.
ಪಾಷಾಬದ್ಧ ಜೀವನರಾಗಿ ಪಶುವೆನಿಸುವನು ಪಾಶಮುಕ್ತನು.
ಶಿವನಾಗಿ ಆ ಪಶುವಿಂಗೆ ಪರನಾದ ಶಿವನು ಪತಿಯೆನಿಸುವನು.
ಬ್ರಹ್ಮದ ಸರ್ವದೇವಃ ವೇಷನಃ ಯೆಂಬ ಶ್ರುತ್ಯಾರ್ಥವನಪ್ರಮಾಣಿಸಿ
ಪಶುವೆ ಪತಿಯೆಂದು ನುಡಿವರು ಅನಭಜ್ಞರು.
॥ಶ್ರುತಿ॥ ರುದ್ರಃ ಪಶುನಾಮದಿ ಪರಿರಿತಿ ಪಶುಗಳಿಗೆ
ಶಿವನೆ ಒಡೆತನವನವುಳ್ಳ ತನ್ನಾಧೀನವುಳ್ಳ ಮಾಯಾ
ಪಾಶದಿಂ ಕಟ್ಟಲು ಬಿಡಲು
ಶಿವನೆ ಪತಿಯೆಂಬ ತಾತ್ಪರ್ಯಾರ್ಥವ ನುಡಿಯರು
ಇದು ದೃಷ್ಟಾಂತ. ಇನ್ನು ಅನುಮಾನವೆಂತೆನಲು ಕೇಳಿರೆ
ಮಾನುಷ್ಯಂಗೆ ಪ್ರಸನ್ನ ಭಕ್ತಿ ಪ್ರಸಾದವ ಕೃಪೆ ಮಾಡಲು
ಮಾನುಷಂಗೆ ಕಾಮಿತನಿಃಕಾಮಿತ ಭಕ್ತಿಯಿಂದ

ಭೋಗಮೋಕ್ಷವನೀವನಾ ಶಿವನು.
ನರನೊಳಗಾಗಿ ನರಪತಿಯು ಸೇವೆಯು ಮಾಡುವಲ್ಲಿ
ನಿರುಪಾಧಿಕ ಸೇವೆಯಿಂದ ಅತಿಶಯ ಪದವನೀವನು.
ಉಪಾಧಿಸೇವೆಯಿಂದಾ ಸಾಧಾರಣ ಪದವನೀವನು
ಇದೀಗ ಅನುಮಾನ ಕಂಡಿರೆ. ಇಂತೀ ಅಷ್ಟತನುಗಳೊಳಗಾದ
ಸಮಸ್ತರು ಪಶುಗಳು ಇವಕ್ಕೆ ಪತಿ ಶಿವನೆಂಬುದಕ್ಕೆ ಕೇಳಿರೆ,
ಪೃಥಿವ್ಯಾಭವ ಅಪಾಂಶರ್ವ ಆಜ್ಞೆ ರುದ್ರಃ ವಾಯೋರ್ಭೀಮಃ
ಆಕಾಶತ್ಯಮಹಾದೇವ ಸೂರ್ಯಸ್ಯೋಗ್ರಃ ಚಂದ್ರಸ್ಯ ಸೋಮಃ
ಆತ್ಮನಃ ಪಶುಪತಿರಿತಃ-
ಎಂದೆನಲು,ಅಷ್ಟತನುಗಳು ಪಶುಗಳು ಪತಿ ಶಿವನು ಕೇಳಿರೆ.
ಇಂತೀ ಅಷ್ಟತನುಗಳು ಶಿವಸಾಜ್ಞೆಯ ಮೀರಲರಿಯವೆಂಬುದಕ್ಕೆ
ದೃಷ್ಟಾವಾರುಣಚೋಪನಿಷತ್ತು ಭಿಷ್ಮಾತಾದ್ವಾತಃ ಪವತೇಭಿಷೋದೈವ
ಸೂರ್ಯ ಭಿಷಾಸ್ಮಾದಜ್ಞೆಯಿಸ್ಮದ್ರುರಶ್ಚಃ ಮೃತ್ಯುರ್ದಾವತಿ ಪಂಚಮಃ
ಇಂತಾಗಿ, ಆಕಾಶಃ ಪರಪರಮೇಶಸ್ಯಾ ಶಾಸನಾದೇವ ಸರ್ವದಾ
ಪ್ರಾಣಾ ಪಾನಾದಿಭಿಶ್ಚಯ ಬೇದ್ಯದಂತಯಿರ್ಲಹಿರ್ಜಗತ್ ಬಭಿರ್ತಿ
ಸರ್ವಾರಿ ಸರ್ವಾಸ್ಯ ಶಾಸನೇವ ಪ್ರಭಾಜನಾ-ಎಂದುದಾಗಿ.
ಹವ್ಯಂಹತಿ ದೇವಾನಾಂತವ್ಯಂ ತವ್ಯಾಶ ತಾಮಪಿ
ಪಾಕಾದ್ಯಂಚಕರೋತ್ಯಗ್ನಿ ಪರಮೇಶ್ವರ ಶಾಸನಾತ್
ಸಂಜೀವನಾದ್ಯಂ ಸರ್ವಸ್ಯಕುರ್ವಂತ್ಯಾಪಸ್ತದಾಜ್ಞಯಾ
ವಿಶ್ವಂವಿಶ್ವಂಭರಾನ್ನಿತ್ಯಂದತ್ತೇ ವಿಶ್ವೇಶ್ವರಾಜ್ಞಯಾ
ತ್ರಿಭಿಕಿ ತ್ರೈಜಗಭಬ್ರುತೇಜೋಬಿರ್ವಿಷ ಮಾದದೆ
ವಿವಿಸ್ಸರ್ವಸ್ಯ ಸಭಾನು ದೇವದೇವಸ್ಯ ಶಾಸನಾತ್
ಪುಷ್ಕತ್ಯೇಷದಿಜತಾನಿ ಭೂತಾನಿಹ್ಲಾದಯಂತ್ಯಪಿ
ದೇವೈಶ್ಯಪಿಯತೇಚಂದ್ರಶ್ಚಂದ್ರ ಭೂಷಣ ಶಾಸನಾತ್
ತೇಸ್ಯಾಜ್ಞಾಂ ವಿನಾತೃಣಾಗ್ರಮಪಿನಾಚತಿ.
ಇಂತೆಂದುದಾಗಿ, ಇದು ಕಾರಣ
ಆತ್ಮಸ್ವರ ಬಸವಪ್ರಿಯ ಕೂಡಲಚನ್ನಸಂಗಯ್ಯನೆಂದರಿಯದೆಲ್ಲರೂ
ಪಶುಗಳು ಪಾಶಾಬದ್ಧರೆಂದು ಎತ್ತಿ ತರ್ಜನಿಯವ ಉತ್ತರವ
ಕೊಡುವರುಳ್ಳರೆ ನುಡಿಭೋ. ॥೯॥

೨೯೪

ಎಲೆ ವೇದಾಂತಿಗಳಿರಾ, ಎಲೆ ನಿರೀಶ್ವರವಾದಿಗಳಿರಾ ನೀವು ಕೇಳಿರೆ.
ನಿಮ್ಮ ನಿಟಿಲತಟದಲ್ಲಿ
ಸಂಚಿತ ಪ್ರಾರಬ್ಧ ಆಗಾಮಿಯೆಂಬ ಲಿಖಿತವ ಬರೆದವರಾರು ಹೇಳಿರೆ?
ನೀವು ನೀವೇ ಬ್ರಹ್ಮವು, ಬೇರೆ ಈಶ್ವರನಿಲ್ಲೆಂದು ನುಡಿವಿರಿ.
ತಪಸ್ಸು ತನ್ನಂತೆ ಊಟ ಮನದಿಚ್ಛೆಎಂಬ ಗಾದೆಯ ಮಾತು
ನಿಮಗಾಯಿತ್ತು.
ಅನ್ನವನುಂಡು, ವ್ಯಸನಕ್ಕೆ ಹರಿದು ವಿಷಯಂಗಳೆಂಬ
ಹಿಡಿಮಲಕ್ಕೆ ಸಿಕ್ಕಿ
ಪಂಚೇಂದ್ರಿಯಂಗಳೆಂಬ ನಾಯಿಗಳಿಚ್ಛೆಗೆ ಹರಿದು, ನಾಯಾಗಿ ಬಗಳಿ,
ನಾಯಡೋಣೆಯಲುಂಡು ನಾಯಿಸಾವು ಸಾವ ಅದ್ವೈತಿಗಳಿರಾ
ನಿಮಗೇಕೋ ಬೊಮ್ಮದ ಮಾತು ?
ಬ್ರಹ್ಮವಿಷ್ಣ್ವಾದಿಗಳು ಬ್ರಹ್ಮೋಹಮೆಂದು, ಕೆಮ್ಮನೆ ಕೆಟ್ಟು
ಹದ್ದು ಹೆಬ್ಬಂದಿಗಳಾದಃದನರಿಯಿರೆ.
ಹಮ್ಮಿನಿಂದ ಸನತ್ಕುಮಾರ ಒಂಟೆಯಾದುದನಯಿರೆ.
ಕರ್ತನು ಭರ್ತನು ಹರ್ತನು ಶಿವನಲ್ಲದೆ
ಬೇರೆ ಕಾವಲ್ಲಿ ಕೊಲುವಲ್ಲಿ ಮತ್ತೊಬ್ಬರುಳ್ಳರೆ ಹೇಳಿರೆ.
ಅದೆಂತೆಂದಡೆ :
ತ್ವಂ ವಿಶ್ವಕರ್ತಾ ತವ ನಾಸ್ತಿ ಕರ್ತಾತ್ವಂ ವಿಶ್ವಭರ್ತಾ ತವನಾಸ್ತಿಭರ್ತಾ।
ತ್ವಂ ವಿಶ್ವಹರ್ತಾ ತವ ನಾಸ್ತಿ ಹರ್ತಾತ್ವಂ ವಿಶ್ವನಾಥಸ್ತವ ನಾಸ್ತಿನಾಥಃ
ಎಂದುದಾಗಿ, ಶಿವನೇ ನಿಮ್ಮನಿಲ್ಲೆಂದು,
ಬೊಮ್ಮ ತಾವೆಂಬ ಹಮ್ಮಿನ ಅದ್ವೈತಿಗಳ ಹಿಡಿದು,
ಕಾಲನ ಕೈಯಲ್ಲಿ ಕೆಡಹಿ ಬಾಯಲ್ಲಿ ಹುಡಿಯ ಹೊಯಿಸಿ,
ನರಕಾಗ್ನಿಯಲ್ಲಿ ಅಕ್ಷಯ ಕಾಲದಿರಿಸದೆ ಮಾಣ್ಬನೆ,
ನಮ್ಮ ಬಸವಪ್ರಿಯ ಕೂಡಲಚನ್ನಸಂಗಮದೇವ ? ॥೧೦॥

೨೯೫

ಎಲೆ ವೈದಿಕರಿರಾ, ನಿಮಗೆ ಸತ್ವಬಲ ವೇದವಲ್ಲದೆ ಮತ್ತೇನೂ ಇಲ್ಲ.
ಆ ವೇದವೆ ಸ್ವಯಂಭುಯೆಂದು ನುಡಿವಿರಿ.
ನಾ ನಿಮಗೆ ತಿಳಿಯ ಪೇಳುವೆ.

ಆದಿ ಸಿದ್ಧಾಂತವಿಡಿದು ವೇದ ಸ್ವಯಂಭುವಲ್ಲ.
ಆದಿ ಮೂಲ ಶಿವನಿಂದಾದವೀ ವೇದಂಗಳು ಕೇಳಿರೆ.
ಶಿವನಿಂದಾದ ಮೂವತ್ತಾರು ತತ್ತ್ವದೊಳೈದನೆಯ ಆಕಾಶತತ್ತ್ವವು
ಆ ಆಕಾಶತತ್ತ್ವದಿಂದಾದ ಶಬ್ದ ವಿಷಯವು ನಿತ್ಯವೆ ಹೇಳಿರೆ.
ಪಂಚಭೂತಂಗಳೊಳಗೊಂದು ಭೂತವಿಷಯವಾ ಶಬ್ದ.
ಆ ಶಬ್ದಸಂಬಂಧವಾದ ವೇದಕ್ಕೆ ನಿತ್ಯವೆಲ್ಲಿದ್ದುದು ಹೇಳಿರೆ.
ಆ ವೇದ ತನಗೆ ತಾನಾದುದೆಂಬಿರೆ,
ಎಂಬಿರಾದಡೆ ಪ್ರಳಯಾಂತಕಾಲದಲ್ಲಿ ಅಳಿಯವೀ ವೇದಾದಿ ವಿದ್ಯಗಳು.
ಜಗತ್ಸೃಷ್ಟಿಕಾಲದಲ್ಲಿ ಆದಿ ಕರ್ತಾರ ಸೃಷ್ಟಿ ಸ್ಥಿತಿ ಲಯ
ಪ್ರೇರಕ ಶಿವನಿಂದಾದವು ಕೇಳಿರೆ.
ಚರಣವಿಹುದು ಸೂಕ್ತಿಗಳಲ್ಲಿ ಕೇಳ್ದರಿಯಿರೆ
ಋಗ್ವೇದಕ್ಕೆ ದೇಹಸುವರ್ಣ ಅತ್ರಿಗೋತ್ರ,
ಗಾಯತ್ರಿ ಛಂದ, ಅಧಿದೇವತೆ ಬ್ರಹ್ಮ.
ಯಜುರ್ವೇದಕ್ಕೆ ಅಬ್ಜದಳಾಯತ ನೇತ್ರ ಕುಂಚಿತ ಚಿಬುಕು
ಮುಂಗೂರ ಮೀಸೆ, ತಾಮ್ರವರ್ಣದೇಹ
ಭರದ್ವಾಜ ಗೋತ್ರ, ತ್ರುಷ್ಟುಪು ಛಂದ, ಅಧಿದೇವತೆ ವಿಷ್ಣು,
ಸಾಮವೇದಕ್ಕೆ ದೇಹ ಶ್ವೇತವರ್ಣ ಕಾಶ್ಯಪಗೋತ್ರ
ಜಗತಿ ಛಂದ ಅಧಿದೇವತೆ ಈಶ್ವರನು.
ಧವಳಶೃಂಗವೆರಡು
ಅಥರ್ವಣವೇದಕ್ಕೆ ದೇಹ ಕೃಷ್ಣವರ್ಣ,
ವೈಭಾನುಗೋತ್ರ, ಅನುಷ್ಟುಪ್ ಛಂದ, ಅಧಿದೇವತೆ ಇಂದ್ರನು.
ಇಂತು ಶ್ರುತಿಗಳಿಗೆ ಶರೀರ ವರ್ಣ ಗೋತ್ರ ಛಂದ
ಅಧಿದೇವತೆಗಳಿಂತಿರಲು
ತಮಗೆ ತಾವಾದವೆಂದು ನೀವು ನುಡಿವ ಪರಿ ಹೇಂಗೆ ಹೇಳಿರೆ. ವೈದಿಕರಿರಾ
ಇವೆ ನಿತ್ಯವೆಂಬಿರಾದಡೆ ಲಯಗಮನ ಸ್ಥಿತಿಯುಂಟು ಕೇಳಿರೆ.
ಹೃದಯ ದೈವ ಗಾಯಿತ್ರಿ ಸರ್ವವೇದೋತ್ತಮೋತ್ತಮ
'ಲಯಂತೆ ಮುರ್ಧ್ನಿ ವೈವೇದಾಸಷದೊ' ಎನಲು, ಆತ್ಮದೃಷ್ಟಿ
ನೇತ್ರದೃಷ್ಟಿಯ ಪ್ರಮಾಣ್ಯದಿಂ ನಮ್ಮಟರುರಿವಿಂಥರಿದೆವೆಂಬಡೆ
ನಿಮ್ಮ ನೀವರಿಯದವರು ಈ ಜಗದಾದಿಯನೆಂತರಿದಿರೆನಲು
ಜ್ಞಾನಸಾಧನವಹ ಶಾಸ್ತ್ರಾದಿಗಳಿಂದ ಜ್ಞಾನೇಂದ್ರಿಯ
ಪ್ರಮಾಣ ನೇತ್ರದಿಂದರಿದೆವೆನಲು,

ನಿಮುಗೆ ಜ್ಞಾನೇಂದ್ರಿಯ ಸಾಧನ ನೇತ್ರಗಳೆಲ್ಲಿಯವು?
ಈಶ್ವರನ ನಯನಾಶ್ವವೆನಿಸುವ ರವಿಚಂದ್ರಾಗ್ನಿ ತೇಜಸ್ಸಿಂದಲ್ಲದೆ
ಜಾತ್ಯಂಧರು ನೀವು ನಿಮಗೆಲ್ಲಿಯ ದೃಷ್ಟಿವಾಳತನ ?
ಅತಿಮತಿವಂತರೆನಿಸುವ ದೇವತೆಗಳುಂ ಕಾಣಲರಿಯರು.
ಮತಿವಿಕಳರು ನೀವು ಕಾಣಲರಿದಿರೆಂತು ಜಗದಾಗುಹೋಗುಗಳ ?
ನೋಡಿಯರಿದೆವೆನಲು ಜಗವನಾದಿ ನೀವು ಮೊನ್ನಿನವರು
ಸಾಮಾನ್ಯ ಮನುಜರು.
ಜಗದನಾದಿಯ ನೀವೆಂತರಿದಿರೆನಲು ಅದು ಕಾರಣ, ಜಗನಿರ್ಮರಣಕ
ಜಗಭ್ರಮಣ ಲೀಲಾಲೋಲ ಜಗದಂತರ್ಯಾಮಿ
ಜಗತ್ರೈರಕ್ಷಕನೊಬ್ಬನೆಯರಿವ ನಿಮಗರುವಿಲ್ಲೆನಲು
ವೇದ ಶಾಸ್ತ್ರಾಗಮಾದಿಗಳಿಂದ ಪ್ರಮಾಣಿಸಿಲರಿದೆವೆನಲು
ನಿಮಗೆ ಶ್ರುತಿ ಪ್ರಮಾಣ ಯೋಚನೆಯದಲ್ಲಿಯದು ?
ಜಗದಾಂಪತಯೆನಮಃ ಎಂದು ಶ್ರುತಿಯಿರಲು
ಇದು ಕಾರಣ, ವೇದಾದಿ ಶಾಸ್ತ್ರಂಗಳಿಂದ ನಿಮಗೇನು ಆಗದು,
ಪಾತಕರರುಹಿತರಲ್ಲದೆ
ಶ್ರುತಿ: ಶಿವೋ ಮಾಯೇವ ಪಿತರಾ ಎನಲು ಶಿವನೇ ವೇದಂಗಳಿಗೆ
ತಂದೆ ತಾಯಾಗಿರಲು
ಜಗತಿಂಗೊಡೆಯನಾಗಿರಲು ಪಿತಾತದಸ್ಯಮಾ ಎಂದು ಪಿತನೆ ಶಿವನು
ತಾಯಿಪುತ್ರರೆಂದೆನಲು
ವೇದಸ್ವಯಂಭು ಜಗನಿತ್ಯವೆಂಬ ಪರಿಯೆ ಹೇಂಗೆ ಹೇಳಿರೆ.
ಪೂರ್ವದಲ್ಲಿ ವೇದಪುರುಷರು ಶಾಂಭವ ವ್ರತಿಗಳು ಪಾಶುಪತವ್ರತಸ ರು
ಶಿವಸಿದ್ಧಾಂತ ಭಕ್ತಿನಿಷ್ಠಾ ಸಾವಧಾನವ್ರತರು
ವೇದಾಧಾರಯಂತಿ ಎನಲು
ರುದ್ರಾಕ್ಷಧಾರಣ ಚತುರ್ವಿಧ ವ್ರತಿಗಳಿಗೆ ಮುಖ್ಯ
ಕ್ರಿಯಾಯುಷಂ ಜಮದಗ್ನೇ ಕೆಸ್ಯ ಪಶ್ಯಾತ್ರಿಯಾಯುಷಂ
ಅಗಸ್ತಸ್ಯಾ ಕ್ರಿಯಾಯುಷಂ ಯದ್ದೇವಾನಾಂ
ತ್ರಿಯಾಯುಷಂ ತನ್ಮೆ ಯಶ್ರುತಿಯಾಯುಷಂ ಎನಲು
ಭಸ್ಮಾವಾಲಿಪ್ತರು ತ್ರಿಪುಂಡ್ರಾಂಕಿತ ನಿಷ್ಠರಾಗಿರರೆ
ವೇದಾಶ್ಚ ಕಾವಯಂತಿ ಎನಲು ತದಸ್ಮಾಮಿ ಎನಲು
ಕಾವಯಂತಿ ಎನಲು ತದಾಸ್ಮಾಮಿ ಎನಲು
ಶಿವಚರಣಸಲಿಲ ಪ್ರಸಾದ ಸುಭೋಗ

ಸಾವಧಾನಿಗಳೆಂದು ತಾವೆ ಹೇಳುತ್ತಿರಲು
ವೇದಾಗಮ ಶಾಸ್ತ್ರಗಳಿಗೂ ಪಂಚಾಕ್ಷರಿ ಮಂತ್ರಗಳಲ್ಲಿಯೆ
ಉದಯ ಸ್ಥಿತಿಲಯವೆನ್ನುತಿರಲು
ನೀವಾವೇದಂಗಳ ಸ್ವಯಂಭೂಯೆಂದೂ ನಿತ್ಯವೆಂದೂ
ಜಗವನೆನಬಹುದೆ ?
ಅದು ಕಾರಣ, ಈ ಜಗಂಗಳನು ತನ್ನ ಲೀಲೆಯಿಂದಲೆ
ನಿರ್ಮಿಸುವಭವನೆನಿಸಿ
ತನ್ನ ಆ ಲೀಲೆಯಿಂದಲೆ ರಚಿಸುವ ಮೃಡನಾಗಿ
ತನ್ನ ಲೀಲೆ ಈ ಲೀಲೆಯಿಂದಲೆ ಸಂಹರಿಸುವ ಹರನಾಗಿ
ಲೀಲಾತ್ರಯರಹಿತನಾಗಿ ಶಿವನೆನಿಸುವ.
ಶ್ರುತಿ: ಆದಿ ವೇದಸ್ಯಶಾಸ್ತ್ರಾಣ ಮಂತ್ರ ಪಂಚಾಕ್ಷರೆಸ್ಥಿತಾ
ಎಂದುದಾಗಿ, ಇದು ಕಾರಣ
ಉದೈಸುವ ರಕ್ಷಿಸುವ ಸಂಹರಿಪ ಭವಮೃಡರನಾದ ಶಿವನಿರಲು
ನೀವು ವೇದಸ್ವಯಂಭು ಜಗ ನಿತ್ಯವೆನಲಾಗದು.
ಶ್ರುತಿ: ಪರವೋಭವಂತಿ ಎನಲು ವೇದದೇವತಾಶ್ರುಷಯೆನಲು
ಈ ಹಿಂಗೆ ವೇದಂಗಳು ಶಿವನಿಂದ ತಮಗೆ ಉದಯ ಸ್ಥಿತಿಲಯವೆನಲು
ಈ ಜಗಸೃಷ್ಟಿ ಸ್ಥಿತಿಲಯ ಕಾರಣ ಸರ್ವಜ್ಞ ಸರ್ವೇಶ್ವರ ಸರ್ವಕರ್ತುಃ
ಯೇಕಯೇವರುದ್ರೋನದ್ವಿತೀಯಾಯತಸ್ತೇ ಎನಲು
ಒಬ್ಬನೆ ಶಿವನು ಎರಡೆನಿಪ ದೇವರಾರುಯಿಲ್ಲವೆಂದರಿಯದಿಹಿರಿ
ವೈದಿಕರಿರಾ ವೇದಸ್ವಯಂಭುವಲ್ಲ ಶಿವನ ಶಿಶುಗಳು
ಜಗವು ನಿತ್ಯವಲ್ಲ ಶಿವನ ಆಜ್ಞಾ ವರ್ತಿಗಳು
ಅಹಂಗಾಗಲದಕ್ಕೇನು ವೈದಿಕಾಚರಣೆಯ ನಾಚರಿಸುವ ವೈದಿಕವ್ರತಿಗಳಿಗೆ
ಸಾಧನವೆನಿಸುವ ವೇದಮಂತ್ರಂಗಳೆ ದೈವವೆನಲು
ವೇದಂಗಳೆ ದೈವವಾದಡೆ ಪಕ್ಷೀಶ್ವರನ ಕೈಯ ಸಿಲುಕುವುದೆ?
ವೇದವೆ ದೈವವಾದಡೆ ಮುನೀಶ್ವರನಿಂದ ಅಳಿದುಹೋಗಿ
ವೇದವ್ಯಾಸನಿಂದ ಪ್ರತಿಷ್ಠಿತವಹುದೆ ?
ವೇದವೆ ದೈವವಾದಡೆ ತಮ್ಮಜನ ಶಿರಹೋಹಂದು ಸುಮ್ಮನಿಹವೆ ?
ವೇದವೆ ದೈವವಾದಡೆ ದಕ್ಷನಳಿವನೆ ?
ವೇದವೆ ದೈವವಾದಡೆ ಕವಿತೆಗೊಳಗಾಹುದೆಯೆಂದು ಎನಲು
ಆಘ್ರಾಯಘ್ರಾಯಾವದಂತಿ ವೇದ ಶ್ವಾನಶ್ಚನೈಶ್ಚನೈಃ
ಯತ್ನದಾನಿಮಹಾದಿವಾಂ

ತಂವಂದೆ ಶಭರೇಶ್ವರಂ ಇಂತೆಂದುದಾಗಿ, ಇದು ಕಾರಣ,
ಶಿವನೆ ಸ್ವಯಂಭು ನಿತ್ಯವೆಂದರಿದ ವಿಪ್ರರೆ ವೈದಿಕೋತ್ತಮರು
ಬಸವಪ್ರಿಯ ಕೂಡಲಚನ್ನಸಂಗಯ್ಯ. ॥೧೧॥

೨೯೬

ಶ್ರುತ್ಯಾಗಮ ಶಾಸ್ತ್ರಾದಿಗಳು ದೈವವಲ್ಲದಿರಲಾ ಸ್ವರ್ಗಮೋಕ್ಷಂಗಳಿಗೆ
ಶ್ರುತ್ಯಾಗಮ ಶಾಸ್ತ್ರಪ್ರಮಾಣ ಸಾಧನವೆಂಬ ಕರ್ಮವಾದಿಗಳಿಗೆ
ನಿರುತ್ತರೋತ್ತರವ ಕೇಳಿರೆ.
ಶ್ರುತಿ: ಜ್ಯೋತಿಷ್ಟೋಮೇನಸ್ವರ್ಗ ಕಾಮೋಯಾಜಕೇತಿ' ಎಂಬಾ
ವೇದವಾಕ್ಯದ ಬಲುಮೆವಿಡಿದು ನುಡಿವರೆ
ಯಜ್ಞದಿಂದ ಸ್ವರ್ಗಾಪೇಕ್ಷಿತನು ಅಗ್ನಿಯನೆ ಪೂಜಿಸುವಯೆಂದು
ಕ್ರಿಯಾಕರ್ಮವೆ ದೈವವೆಂದಃ ತಾನು ಮಾಡಿದ ಕರ್ಮ ಫಲವು
ತನಗೆ ಅನುಭವಿಸಲುಳ್ಳದೆಂದು
ಕರ್ಮಕ್ಕೆ ಕರ್ತೃತ್ವವನ್ನು ಕೆಲಬರು ಕರ್ಮವಾದಿಗಳು ಹೇಳುತ್ತಿಹರು.
ಆ ಹಂಗಲ್ಲ ಕರ್ಮವೆ ಶರೀರದಿಂದನುಭವಿಸಲುಳ್ಳರಾಗಿ
ವರ್ತಿಸುತ್ತಿಹುರೊ
ಅಲ್ಲ ಮತ್ತಾ ಶರೀರಕ್ಕೆ ಕರ್ಮವೆ ಅನಾದಿಯಹುದೊ
ಈ ಕರ್ಮಕ್ಕೆ ಕಾಯವು ಅನಾದಿಯಹುದೊ
ಆ ಕರ್ಮ ಕಾಯಂಗಳೆರಡು ಜೀವಾತ್ಮನನು ಒಂದೇ ಬಾರಿಯಯಿದಿದೊ
ಈ ಹಿಂಗೆಂದು ಕೆಲಬರು ತರ್ಕಿಸುವರು.
ಅದು ಹಂಗಾಗದಿಹುದಲ್ಲದೆ
ಆ ಕರ್ಮವು ಕ್ಷಣಿಕವಾಗಿಯೂ ಅಚೇತನವಾಗಿಯೂ
ನಿರ್ಗುಣವಾಗಿಯೂ ಕಾಣಲುಳ್ಳದಾಗಿ
ಅದು ಮಾಡುವಾತನನುಯೆ ಹಾಂಗೆಯಿಹುದು.
ಆ ಕರ್ತನು ಆವನೊಬ್ಬನು ಅಪರಾಧವ ಮಾಡಿದವ
ಮಾಡಿದ ಪುರುಷನು ಆ ಅಪರಾಧಕ್ಕೆ ತಕ್ಕದಾದ ಶಿಕ್ಷೆಯನು
ತನಗೆ ತಾನೆ ಮಾಡಿದನೊಯೇನು ಅಲ್ಲ.
ಮತ್ತೆ ಆ ಅಪರಾಧವೆ ಸಂಕಲೆಯಾಗಿ ಆ ಅಪರಾಧಿಯ
ಕಾಲ ಬಂಧಿಸುಹವನು.
ಮಾಡೋದೊಯೇನು ಅಲ್ಲ.
ಮತ್ತೆ ಆ ಅಪರಾಧಿಗೆ ಕರ್ಮಿಗೆ ಆ ಕರ್ಮವನೂ ಸಂಘಟಿಸಲು

ಕರ್ಮಾಧೀನನಲ್ಲದಾತನಾಗಿ ಸ್ವತಂತ್ರನಾಗಿ ಸರ್ವೇಶ್ವರ
ಎಲ್ಲದಕ್ಕೂ ಒಡೆಯನಾಗಿ
ಸರ್ವಗತನಾಗಿ ಸರ್ವಗತನಾದ ಶಿವನು ಉಂಟಾಗಿ
ಕರ್ಮಕ್ಕೆಯೂ ಕರ್ಮಿಗೆಯೂ ಕರ್ತೃತ್ವವಾಗದು.
ಈ ಹಿಂಗಾಗದಿಹುದೆ ಪೂರ್ವ ಮೀಮಾಂಸವನು ಹೇಳುವಾ
ಒಬ್ಬುಳಿಯ ಕರ್ಮಂಗಳು
ಬೇರೆ ಬೇರೆ ಆರುತೆರಂಗಳಾಗುತಿಹವು
ಅವಾವೆನಲು, ಅಮಾವಾಸ್ಯೆ ಹುಣ್ಣಿಮೆಗಳಲಿ ಪಿತೃಕಾರ್ಯ
ಮೊದಲಾದ ಕರ್ಮಂಗಳ ಮಾಡಬೇಕಾದುದರಿಂದ
ಒಂದಾನೊಂದು ಸಂಸ್ಕಾರವನ್ನು ಸಂಘಟಿಸುತ್ತಿಹವು.
ಆ ಸಂಸ್ಕಾರ ರೂಪಂಗಳಾದ ಆರು ಅಪೂರ್ವಂಗಳಾಗುತ್ತಿಹವು
ಅವು ಬೇರೊಂದು ಪ್ರಮಾಣದಿಂದ ಪೂರ್ವಮಾಗಿ ಉತ್ಕೃಷ್ಟವಾದ
ಅಪೂರ್ವವನ್ನು ಹುಟ್ಟಿಸುತ್ತಿಹವು.
ಆ ಉತ್ಕೃಷ್ಟವಾದ ಪೂರ್ವದಿಂದಾ ಮಾತಲುಳ್ಳ ಫಲದ ಕಡೆವು
ಅದೆ ದೈವವೆಂದು ಕಾಣಬಾರದೆಂದು ಕರ್ಮವೆಂದು
ನಾಮ ಮೂರಾರದವರಿಂದ
ದೇಹಾಂತರ ಲೋಕಾಂತರ ದೇಶಾಂತರ ಕಾಲಾಂತರಗಳಲ್ಲಿ
ಅದು ಆತಂಗೆ ಅನುಭವಿಸಬೇಕಾದ ಫಲಂಗಳನು
ಕೊಡುತ್ತಿಹುದೆಂಬ ವಚನ ವ್ಯರ್ಥವು.
ಅದು ಹೇಗೆಂದಡೆ ಜಡಸ್ವರೂಪವಾದ ಕರ್ಮವು
ದೇಹಾಂತರ ಮೊದಲಾದವರಲ್ಲಿ
ಆ ಫಲವನು ಕೊಡಲು ಸಮರ್ಥವಲ್ಲದಿಹುದೆ
ಈಹಿಂಗಾಗಿ ಒಡೆಯನನು ತೊಲಗಿಸಿ ಕರ್ಮಫಲವನು ಕೊಡುವದಹುದೆ?
ಅಹಂಗಾದಡೆ ಜೈನ ಬೌದ್ಧ ಮೀಮಾಂಷಾದಿ ಕರ್ಮವಾದಿಗಳ
ಜಪತಪದಾನಧರ್ಮ ಫಲಂಗಳು ವ್ಯರ್ಥಂಗಳಾಗುತಿರಲು
ಅವು ಪುಷ್ಟಿವರ್ಧನ ಭೂತಾವಾದ ಭೋಜನಕ್ರಿಯೆಗಳಿಂದ
ಏಹಾಹಂಗೆ ಮರಣವು ಆಯಿತ್ತು
ಅಹಂಗೆ ಒಂದೆ ಕರ್ಮವು ಫಲವ ಕೊಡಲು ಸಮರ್ಥವಲ್ಲ.
ಅಹಂಗಾಗದಿಹುದೆ ಭೋಜನವ ಮಾಡಿದ ಮಾತ್ರವೆ
ಪುಷ್ಟಿಯಾಗುತ್ತಿಹುದು ಮರಣವಿಲ್ಲದಿಹುದು.
ಹಿಂಗಲ್ಲವೊ ಎಂದಡೆ ಕೆಟ್ಟ ಕರ್ಮವುಯೆಯ್ದಿತ್ತು.

ಉಂಡದರೊಳಗೆ ಸಿಲ್ಕಿದ ಅನ್ನವು ವಿಷವಹುದಲಾ
ಪುಷ್ಟಿಯು ತೊಲಗಿಸಿ ಮರಣವನು ಅಹಂಗೆ ಕೊಡುತ್ತಿರದು.
ಇದು ಕಾರಣ ಸರ್ವಗತನಾದ ಶಿವನು ಅರಿಕರ್ಮಕ್ಕೆ
ತಕ್ಕ ಫಲವ ಕೊಡುವಾತನು.
ಹಿಂಗಾಗಿರಲಿ, ಕರ್ಮಕ್ಕೆ ತಾನೆ ಕರ್ತೃತ್ವವಾಗುಹವು ಆಗುತ್ತಿರದು
ಮತ್ತೆಯೂ ದೃಷ್ಟಾಂತ: ಸರಳು ಬಿಲ್ಲಕಾರನಿಲ್ಲದೆ ತಾನು
ಗುರಿಯು ತಾಗೂದೆಯೇನು ?
ಅಹಂಗೆ ಕರ್ಮವು ಶಿವಪ್ರೇರಣೆಯಿಲ್ಲದೆ ಅಕರ್ಮಿಗೆ ಮೇಲುಕೀಳಾದ
ಕರ್ಮಫವನು ತಾನೆ ಕೊಡಲು ಸಮರ್ಥ್ಯವಿಲ್ಲ ತಪ್ಪದು
ವಾಯುವ್ಯದಲ್ಲಿ ಅಜ್ಞೋಜಂತುರಶಾಯುಮಾತ್ಮನಃ
ಸುಖದುಃಖಯೋಃ ಈಶ್ವರಃ
ಪ್ರೇರಿತೊ ಗಚ್ಛತ್ಸ್ವರ್ಗಂ ವಾ ಸ್ವಭ್ರಮೇವವಾ.
ಅದು ಕಾರಣ, ಅರಿಯದವನಾಗಲಿ ಅಯಂ ಜಂತು
ಈ ಪ್ರಾಣ, ಆತ್ಮನಃ ತನ್ನ
ಸುಖದುಃಖಯೋಃ ಸುಖದುಃಖಂಗಳಿಗೆ, ಅನಿಶಃ ಒಡೆಯನಲ್ಲ.
ಈಶ್ವರ ಪ್ರೇಂತ ಶಿವನು ಪ್ರೇರಿಸಲುಳ್ಳವನಾಗಿ
ಸ್ವರ್ಗವನಾದಡೂ ನರಕವನಾದಡೂ ಎಯ್ದುವನು
ನಾಭೊಕ್ತಂಯತೇ ಕರ್ಮ ಕಲ್ಪಕೋಟಿಶತ್ಮದಪಿ
ಅವಸ್ಯ ಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ.
ಇವು ಮೊದಲಾದ ವಚನ ಪ್ರಮಾಣದಿಂದ
ಕರ್ಮವು ಕಲ್ಪಕೋಟಿ ಶತಂಗಳಿಂದಡಾ ಅನುಭವಿಸಿ ತೀರದು
ಮಾಡದುಳ್ಳದಾಗಿ ಮೇಲು ಕೀಳಾದರ್ಮವು
ಯಾನ ಮಾಡಿಯು ಅನುಭವಿಸಬೇಕಾದುದು.
ಈ ಓಗೆಂಬ ವಚನವು ವ್ಯರ್ಥ ಪೋಗುತ್ತಿಹುದು.
ಅದು ಹೆಂಗೆಯಾಯೆಂದೆಡೆ,
ವಾಯವ್ಯದಲ್ಲಿ, ಅಹೋವಿಧಿಪರ್ಯಾಸುಮಿಚ್ಚೆಮೇದೊ
ಯಾವದ್ವರಂ ಯಜಮಾನ ಸ್ವಯಂದಕ್ಷಃ
ಬ್ರಹ್ಮಪುತ್ರ ಪ್ರಜಾಪತಿ ಧರ್ಮಾದಯಃ
ಸದಸ್ಯಾಶ್ಚರಕ್ಷಿತಾ ಗುರುಡಧ್ವಜಃ
ಭಾನಾಶ್ಯಪ್ರತಿ ಗ್ರುಣ್ವಂಕ್ತಿ ಸಾಕ್ಷಾದಿಂದ್ರಾದಯಸ್ಸರಾಃ ತಥಾಪಿ
ಯಜಮಾಸ್ಯದಕಸ್ಯಾ ದಾಹಂರ್ತಿಜಃ ಸದ್ಯಯೇವ

ಶಿರಘೇದ ಸಾದುಸಂಪದ್ಯತೆ
ಫಲಂ ಕೃತ್ವಾತು ಸಮಹತ್ಪುರಣ್ಯಾಮಿಷ್ಟ ಯಜ್ಞಾಶತೈರಪಿ
ಸತತ್ಫಲಮವಾಪ್ನೋತಿ ಭಕ್ತಿ ಹೀನೋಯದೀಶ್ವರ'.
ಈ ಅರ್ಥದಲ್ಲಿ ಸತ್ಪುರುಷರ ವೇದದಿಂದರಿಯರಲು
ತಕ್ಕದಾದ ಆಚಾರವನು ಬಿಟ್ಟು ಒಡನೆ ಹುಟ್ಟಿದುದಾದ
ತನ್ನವರೆಂಬ ಸ್ನೇಹದಲ್ಲಿ ಹುಟ್ಟಿದುದಾಚರಣವನ್ನು ಬಿಟ್ಟು
ಅಪಾಯರಹಿತವಾಗಿ ಪ್ರಮಥಪದವಿಯನು ಎಯ್ದಿದನು.
ಈ ಹಿಂಗ. ಗಿಯೆ ಬರಿಯ ಕರ್ಮಕ್ಕೆ ಕರ್ತೃತ್ವವುಂಟಾಗುತಿಹುದೆ ?
ಚಂದಡೇಶ್ವರನಿಂದಾ ತನ್ನ ತಂದೆಯಾದ ಬ್ರಾಹ್ಮಣನ
ಕಾಲುಗಳ ತರಿದಲ್ಲಿ
ಆ ದೋಷಫಲವುಯಹಂಗೆ ಇಲ್ಲವಾಯಿತ್ತು ?
'ಮಾಮನದೃತ್ಯಾ ಪುಣ್ಯಂ ವಸ್ಯಾಂಸ್ಪ್ರತಿಪಾದಿನಃ
ಮಂನ್ನಿಮಿತ್ಯಾಕೃತಂ ಪಾಪಂ ಪುಣ್ಯಂ ತದಪಿಜಾಯತೇ'.
ಇದು ಶಿವನ ನುಡಿ ಮಾರಿಯನ್ನನು ಕೈಕೊಳ್ಳದ ಪುಣ್ಯವಾದಡೆಯೂ
ಮಾಡುವವಂಗೆ ಪಾಪವು ಅಹುದು.
ನಾನು ನಿಮಿತ್ತ ಮಾಡಿದ ಪಾಪವಾಯಿತ್ತಾದರೆಯೂ
ಸಕೃತವಾಗುತ್ತಿಹುದು.
'ಉಪಕ್ರಮ್ಯ ಕರ್ಮಾದಿ ಪತಿತ್ವ ವಿರುಪಹ್ರೊಸ್ಥಿತಿ
ಸರ್ವ ಕರ್ಮಾದಿ ಪತಿಃ'.
ಮತ್ತೆ ಉಪಕ್ರಮಿಸಿ ಕರ್ಮಂಗಳಿಗೊಡೆಯನುನ
ಪರಮೇಶ್ವರನು ಉಂಟೆಂಬ
ವೇದವು ಮೊದಲಾದ ವಾಕ್ಯ ಪ್ರಮಾಣದಿಂದ
ನಾನಾ ಪುರಾಣ ವಚನ ಪ್ರಮಾಣದಿಂದ
ಸಮಸ್ತ ಕರ್ಮಂಗಳಿಗೊಡೆಯ ಶಿವನು
ಆಶಿವನ ತೊಲಗಿಸಿ ಬರಿಯ ಕರ್ಮಕ್ಕೆ ಕರ್ತನಾಗುಹುದು ಇಲ್ಲದಿರುತ್ತಿದು.
ಇದನರಿದು ಎಲೆ ಕರ್ಮವಾದಿಗಳಿರಾ ಸಕಲ ಕರ್ಮಕ್ಕೆ
ಶಿವನೆ ಕರ್ತುವೆಂದರಿದಿರಾದಡೆ
ಬಸವಪ್ರಿಯ ಕೂಡಲಚನ್ನ ಸಂಗ ನಿಮಗೆ ಸುಕರ್ಮ
ಫಲವನು ಕೊಡುವ ಕಂಡಿಕೆ. ॥೧೩॥

೨೯೭

ಮತ್ತೆಯೂ ಸಮಸ್ತವಾಗಿ ಕರ್ಮಕೃತ ಶರೀರಿಗಳಿಗೆ
ಭೋಗವುಳ್ಳದೆ ತಪ್ಪದೆಂಬೆಯಾದಡೆ
ಶರೀರಗಳಿಗಾಗಲಿ ಪ್ರೇರಕತ್ವದಿಂದಲ್ಲವೆಂಬುದೆ ಪ್ರಮಾಣ.
ಶಿವಪ್ರೀತ್ಯರ್ಥವಾದ [ಜೀವಿ]ಗಳು ಕರ್ತುವನೆಯ್ದುವವೆಂಬುದಕ್ಕೆ
ಪ್ರಮಾಣವುಯೆನಲು
ಪಿತೃವಧೆಯಿಂದ ಚಂಡೇಶ್ವರನು ಅನುಪಮ ಗಣಪದವನೈದಿದನು.
ಸಿರಿಯಾಳನು ತನ್ನ ಮಗನನೆ ವಧಿಸಿ
ಪುರಜನ ಬಾಂಧವರು ಸಹಿತ ಶಿವಲೋಕವನೈದಿಡನು.
ಕಾಲಾಂತರದಲ್ಲಿ ಮನುಚೋಳನು
ಪುತ್ರವಧೆ ಭ್ರೂಣಹತವನು ಮಾಡಿ ಎಸಗಿ
ತನುವೆರಸಿ ಶಿವಲೋಕವನೆಯ್ದಿದನು.
ಅಯ್ಯೋಮರಾಜನು ವಿಪ್ರೋತ್ತಮನನೆ ವಧಿಸಿ
ಲಿಂಗಗರ್ಭಾಂತರವನೆಯ್ದಿದನು.
ಅಂದು ಜಂಗವರೆಯಲದಂತಿಲಿ
'ಸ್ವರ್ಗ ಕಾಮೋಃಯಜೇತತಿ'ಯೆಂಬ ಶ್ರುತಿಪ್ರಮಾಣಂ
ದಕ್ಷಪ್ರಜಾಪತಿ ಕ್ರಿಯೆಗಳಿಗೆ ಅಧ್ಯಕ್ಷನು
ಅಧ್ವರ ಕರ್ಮದಿಂದಾ ಶಿರಚ್ಛೇದಿಯಾಗಿ ಕುರಿದಲೆ ಪಡೆಯನೆ ?
ಬರಿಯಾ ಅಚೇತನ ಕರ್ಮಂಗಳು ಕೊಡಬಲ್ಲವೆ
ಸದ್ಗತಿ ದುರ್ಗತಿಗಳನು?
ಕರ್ತು ಪ್ರೇರಕ ಶಿವನಲ್ಲದೆ ?
'ಮನ್ನಿಮಿತ್ತಕೃತಂ ಪಾಪಮಪೀಡಾವರ್ಜಯ್ಯೆ ಕಲ್ಪ್ಯತೇ' ಎನಲು
ಇಂತೀ ಚಟಿಮಿಟಿವಾದವೆಂಬುದು ಕೊಳ್ಳವು ಕೇಳಾ.
ಶಿವಭಕ್ತಿಯೆಂಬ ಪ್ರಚಂಡ ರಪಿಕಿರಣದ ಮುಂದೆ
ಸಾಮಾನ್ಯ ಕರ್ಮವೆಂಬಾ ತಮ ನಿಲುವುದೆ ಮರುಳೆ ?
'ಅಹೋರಾಜಾ ನಮದ್ವರಸ್ಯಾಂ ರುದ್ರಂ' ಎನಲು,
'ಇಂದ್ರ ಉಪೇಂದ್ರಾಯ ಸ್ವಾಹಾ' ಎನಬಹುದೆ ?
ಪ್ರಥಮಾಹುತಿಯಲ್ಲಿಯೆಂದು ಬೀಳಲು
ಭಸ್ಮವಹವಾ ಆಹುತಿ ಫಲಂಗಳು?
ಆದಡೆ ಕೇಳು ಆ ಶಿವಭಕ್ತಿಬಾಹ್ಯವಾದ ಪಾಪಕರ್ಮಕೆ
ಬಂದ ವಿಪರೀತ ಪ್ರಾಪ್ತಿಗಳು.

ವಿಷ್ಣು ಸುರರಿಗೆ ಹಿತವಾಗಿ ಭೃಗು ಸತಿಯ ಶಿರವನರಿದಡಾ
ಕರ್ಮ ದಶಜನ್ಮಗಳಿಗೆ ತಂದು ಹೀನ ಪ್ರಾಣಿಗಳ
ಯೋನಿಯಲ್ಲಿ ಬರೆಸಿದುದನರಿಯಿರೆ!
ಮತ್ತೆಯು ಬಾಲೆಯ ಕೊಂದ ಕರ್ಮ
ಕೃಷ್ಣಾವತಾರದಲ್ಲಿ ವ್ಯಾಧ ನಿಂದಾ ತನ್ನ ಕೊಲ್ಲಿಸಿತ್ತು.
ಮತ್ತೆಯು ಬಯ ಬಂಧಿಸಿದ ಕರ್ಮ
ಮುಂದೆ ನಾಗಾರ್ಜುನನಿಂದ ಕಟ್ಟಿಸಿತ್ತು.
ಕೌರವಕುಲವ ಕೊಲಿಸಿದ ಕರ್ಮಫಲ ತನ್ನ
ಯಾದವ ಕುಲವ ಕೊಲಿಸಿತ್ತು.
ಮತ್ತಾಲೀಲೆಯಿಂದ ಮತ್ತೆಯೂ ಪರ್ವತನಾರಂದರ ಸತಿಯ ಬಲುಮೆ
ಇಂತೆಕೊಂಡ ಕರ್ಮಫಲ ರಾವಣಗೊಪ್ಪಿಸಿತ್ತು.
ತನ್ನ ಪ್ರಿಯತಮೆಯೆನಿಸುವ ಸೀತಾಂಗನೆಯ. ಇನ್ನು ಮಿಕ್ಕಿನ
ದೇವದಾನವ ಮಾನವರನೊಕ್ಕಲಿಕ್ಕಿಯಾಡದಿಹುದೆಯಾ ಕರ್ಮವು ?
ಆದಡಾ ಕರ್ಮವು ಸ್ವತಂತ್ರವೊ ಪರತಂತ್ರವೊ ? ಎಂಬೆಯಾದಡೆ
ಆಕರ್ಮ ಈಶ್ವರಾಜ್ಞೆಯಲ್ಲದೆ ಕರ್ಮಿಯಾ ತಾನದೆಂತೆಯ್ದಿದು ?
ಗುರು ಕನಿಷ್ಠಾಧಮ ಮಧ್ಯಮ ಕ್ರಿಯಗಳಿಂ ವಿಧಿಸಿದ ವಿಧಿಗಳಿಂ
ವಿಧಿನಿಷೇಧ ಕರ್ಮಂಗಳೆಂಬ ಸಮೂಹ
ಕರ್ಮಂಗಳಿಗೆ ತಾರತಮ್ಯವಿಡಿದು
ಪುಣ್ಯ ಪಾಪಂಗಳ ನಿರ್ಮಿಸಿ ಅಜ್ಞಾಪಿತವ ಮಾಡಿದನೀಶ್ವರನು.
ನಾಕನರಕಾದಿಗಳೆ ಸಾಧನವಾಗಿ ಕರ್ಮಕರ್ತನನೆಯ್ದುವರೆ
ಕರ್ಮಕರ್ತನು ಈಶ್ವರನಾದಡೆ ಕರ್ಮನೀಶ್ವರಾಜ್ಞೆಯಿಂದೈದುವಡೆ
ಆಕರ್ಮ ಕರ್ತನಹ ಈಶ್ವರನನು ಬ್ರಹ್ಮನ
ಮೇಲ್ದಲೆಯನರಿದುದಾಗಿ
ಆ ಕರ್ಮ ಆತನನೆಯ್ದುದುಮೆನಲು ಅಹಂಗಾಗದು.
ವಿರಿಂಚನು ರಜೋಗುಣಹಂಕಾರದಿಂ ಸುರಕಿನ್ನರ
ಗರಡು ಗಾಧರ್ವ ಸಿದ್ಧ ವಿದ್ಯಾಧರರು
ತಮ್ಮೊಳು ಬ್ರಹ್ಮವಾದದಿಂ ಸಂಪಾದಿಸಿ ತಿಳಿಯಲರಿಯದೆ
ಬ್ರಹ್ಮನಂ ಬೆಳಗೊಳಲು ಬೊಮ್ಮವಾನೆನಲು
ಆ ಕ್ಷಣಂ ಗಗನದೊಳು ತೋರ್ಪ
ಅತ್ಯನುಪಮ ದೇದೀಪ್ಯಮಾನ ತೇಜಃಪುಂಜ
ಜ್ಯೋತಿರ್ಲಿಂಗಾಕಾರಮಂ ಕೋರಲಾ

ಬ್ರಹ್ಮೇಶ್ವರರು ಆ ವಸ್ತು ನಿರ್ದೇಶವಮಂ ಮಾಳ್ಪೆನೆಂದು
ಪಿತಾಮಹನು ಚತುಶ್ಶಿರ ಮಧ್ಯದಲ್ಲಿ ಮೇಲ್ದಲೆಯಂ ಪುಟ್ಟಿಸಿ
'ಋತಂ ಸತ್ಯಂ ಪರಬ್ರಹ್ಮ' ಯೆಂದು
ಋಗ್ಯಜುಸ್ಸಿನಲ್ಲಿ ಸುತಿಸುತ್ತಂ ಇರಲು,
'ಬ್ರಹ್ಮಾದಿಪತಿ ತತ್ಪರ ಬ್ರಹ್ಮಶಿವ ಇತಿ ಓಂ ಇತಿ ಬ್ರಹ್ಮಾ ಇತಿ'
ಇಂತೀ ಶ್ರುತಿ ಸಮೂಹವೆಲ್ಲವು ಶಿವನನೆ ಪರಬ್ರಹ್ಮವೆಂದು ಲಕ್ಷಿಸಿ.
ಮತ್ತತನದಿಂ ಮರದೂ ಅಬ್ರಹ್ಮವೆನಲು
ದ್ರುಹಿಣನ ಮೇಲ್ದಲೆಯಂ ಅಪ್ರತಿಮ ಮಹಾತೇಜೋಮಯ
ಲೀಲಾಲೋಲಾ ಶೀಲ
ದುಷ್ಟನಿಗ್ರಹಿ ಶಿಷ್ಟ ಪ್ರತಿಪಾಲಕನನೆಯಾಕ್ಷಣಂ
ಘನ ರೌದ್ರ ಕೋಪಾಟೋಪಿಯೆನಿಸುವ
ಕಾಲರುದ್ರಂ ಸಮೀಪಸ್ಥನಾಗಿರ್ದು
ಜ್ಯೇಷ್ಠಾ ತರ್ಜನಾಂಗುಲಿ ನಖಮುಖದಿಂ
ಛೇದಿಸಲು, ವಿಧಿಭಯಾತುರನಾಗಿ
"ಓಂ ನಮೋ ದೇವಾಯ ದೇವ್ಯೈನಮಃ
ಸೋಮಾಯ ಉಮಾಯೈನಮಃ'
ಎಂದು ಸೋಮಾಷ್ಟಕದಿಂ ಸ್ತುತಿಸಿ ನಮಿಸಿ ಯೆಜಿಸಿ ಮೆಚ್ಚಿಸಿ,
ಸ್ವಾಮಿ ಸರ್ವೇಶ್ವರಾ ವ್ಯೋಮಕೇಶಾ ದೇವದೇವ ಮಹಾಪ್ರಸಾದ
ಈ ಶಿರಮಂ ಬಿಸಾಟದಿರಿ, ಬಿಸಾಟಲು ಪುರತ್ರಯ
ಜಗಮಳಿಗುತ್ತಂ ನಿಮಿತ್ತಂ
ಪರಮ ಕೃಪಾನಿಧಿ ಪರಬ್ರಹ್ಮ ಪರಂಜ್ಯೋತಿ
ಪರಮೇಶ್ವರ ಪರಮಭಟಾರಕ
ಪರಾತ್ಪರತರ ಸದಕ್ಷರಚಿನ್ಮೂರ್ತಿ ಸ್ವಯಂಭೋ
ಸ್ವಾತಂತ್ರೇಶ್ವರಾಯೆನುತ ಕೀರ್ತಿಸುತ್ತಿರಲು,
ಪರಬ್ರಹ್ಮ ನಿರೂಪದಿಂ ಕಾಲರುದ್ರನ ಕಾಪಾಲಮಂ ಧರಿಸಿದನಂದು.
ಇನ್ನೆಮುಗಿದೆ ಮತವೆಂದು ಸರ್ವದೇತಾ ವರ್ಗ ಕಂಡೂಕ್ಷಮಂ
ಉರ್ವಿಯೊಳೀಗಮೆ ತೀರ್ಚಿಪನೆಂದು ಪಿಡಿದು ನಡೆದಂ ಭಿಕ್ಷಾಟನಕಂದು.
ಆಹಾಲಿಲೇಸಾಯಿತ್ತಿದು ಕರ ಹೊಸತು! ಇನಿತರಿಂದಾ
ಕಾಲರುದ್ರಂಗೆ ಬ್ರಹ್ಮೇತಿಯಾಯಿತ್ತೆಂಬ ಕರ್ಮವಾದಿ ಕೇಳಾದಡೆ,
ಶಾಮಶ್ರುತಿ :
ತ್ವಂ ದೇವೇಷು ಬ್ರಾಹ್ಮಣಾಪ್ವಯಂ ದುನುಜಷೋಮನುಷ್ಯೇಶು

ಬ್ರಾಹ್ಮಣಾ ಮುಪದಾವತ್ಯುಪದಾರತ್ಯಾ ಎನಲು,
ಬ್ರಾಹ್ಮಣ ಭಗವಾನ್‌ರುದ್ರ ಎನಲು, ಕ್ಷತ್ರಿಯೋಃ ಪರಪೋಹಂ
ಪಿತಾಮಹಸ್ತುವೈಶ್ಯಶ್ಚಾ ಎನಲು,
ಬ್ರಾಹ್ಮಣೋತ್ತಮಾ ಬ್ರಾಹ್ಮಣಾದಿಪತಿ ಪರಬ್ರಹ್ಮವಿದ್ದಂತೆ,
ತಾನೆ ಪರಬ್ರಹ್ಮವೆನಲಾ ವಿಧಿಯ ಶಿಕಿಪುದು ವಿದಿತವಲ್ಲದೆ ನಿಷೇಧವಲ್ಲ.
ಅದೆಂತೆನೆಲು, ಭೂಚಕ್ರ ವಳಯದೊಳು ಭೋಮೀಶ್ವನು
ಅನ್ಯಾಯಗಳ ಶಿಕ್ಷಿಸಿದಾ ಭೂರಕ್ಷಣ್ಯವು
ಲೋಕಹಿತವಲ್ಲದೆ ದೋಷ ಸಾಧನವೆಯೆಲ್ಲಾ.
ಪಾಪಿಗೆ ತಕ್ಕ ಪ್ರಾಯಶ್ಚಿತ್ತ ಮೆಂದುಂಟಾಗಿ,
ಇದು ಕಾರಣ, ಶಿಕ್ಷಯೋಗ್ಯನ ಶಿಕ್ಷಿಸಿದವಗೆ ದೋಷವಿಲ್ಲೆಂದು
ಭಾಷ್ಯದೊಳೊಂದು ಪಕ್ಷಮಿರೆ;
ಮತ್ತಪುದಲ್ಲಿದೆ, ಅಂದೊಮ್ಮೆ ಹತ್ತು ತಲೆಯುವನಂ
ಅತ್ಯುಗ್ರದಿಂ ವಧಿಸಿದ' ಶ್ರೀರಾಮುಂಗೆ
ಬ್ರಹ್ಮಹತ್ಯಾ ಬ್ರಹ್ಮಕರ್ಮ ವಿದ್ಯಾಬ್ರಾಹ್ಮರಿಂದಾವಾವ
ಪ್ರಾಯಶ್ಚಿತ್ತದಿಂ ಕೆಮ್ಮನೆ ಕೆಡದಿರಲು.
ಆ ರಾಮಂ ಆ ರಾವಣಹತ ದೋಷ
ನಿರುಹರಣಕ್ಕಾವುದಂ ಕಾಣದಿರಲು,
ಶಂಭುಪೌರಾಣಿಕನೆಂಬ ನಾಮವಂ ತಾಳ್ದು
ಶಿವಂ ರಾಮುಂಗೆ ಪ್ರತ್ಯಕ್ಷವಾಗಿ,
ಈ ದೋಷಕ್ಕೆ ಲಿಂಗಪ್ರತಿಷ್ಠೆಯು ನಿರೊಹರಣವೆಂದರುಪಿ,
ಅರಿದಾ ರಾಮಂ ಗಂಧಮಾದ ಪರ್ವತವೇ ಆದಿಯಾಗಿ
ಅದನು ಕೋಟಿಯೆ ಅವಧಿಯಾಗಿ ಶಿವಲಿಂಗಪ್ರತಿಷ್ಠೆಯಂ ಮಾಡೆ,
ರಾಮೇಶ್ವರ ಲಿಂಗಮೆನಿಪ್ಪ ನಾಮಾಂಕಿತದಿಂ
ತಕವಕಮಿಗೆವರಿದು ಸಾತ್ವಿಕ ಭಕ್ತಿಭಾವದಿಂದರ್ಚಿಸಿ ಸ್ತುತಿಸಿ
ಭೂವಳಯದೊಳೆಲ್ಲಂ ಪ್ರದಕ್ಷಿಣ ಮುಖದಿಂ
ಶಿವಲಿಂಗಾಲಯಮನೆತ್ತಿಸಿ,
ಅಂತ ಸಹಸ್ರಾವಧಿಯೆನಿಸುವ ದಶಗ್ರೀವ
ವಧೆಯಂ ಪರಿಹರಿಸಿದ ಹಾಗೆ,
ಶ್ರೀ ಮನ್ಮಹಾದೇವನು ದೇವಾದಿದೇವನೂ ದೇವಚಕ್ರವರ್ತಿ
ದೇವಭಟ್ಟಾರಕನೂ
ದೇವವೇಶ್ಯಾ ಭುಜಂಗನೂ ಸರ್ವ ದೇವತಾನಿಸ್ತಾರಕನೂ
ಸರ್ವದೇವತಾ ಯಂತ್ರವಾಹಕನೂ

ಒಂದಾನೊಂದೆಡೆಯಲ್ಲಿ ಮಹಾದೇವೇಶ್ವರನು
ರುದ್ರೇಶ್ವರನು ಈಶ್ವರೇಶ್ವರನು ಶಂಕರೇಶ್ವರನೆನಿಪ ನಾಮಂಗಳಿಂ
ಭೂವಳಯದೊಳು ಲಿಂಗಪ್ರತಿಷ್ಠೆಯಂ ಬ್ರಹ್ಮಶಿರಚ್ಛೇದನ
ನಿಮಿತ್ತದಿಂ ಮಾಡಿದುದುಳ್ಳಡೆ ಹೇಳಿರೆ ಕರ್ಮವಾದಿಗಳು.
ಅಂತುಮದಲ್ಲದೆಯುಂ ಆ ಉಗ್ರನಿಂದಂ ಪಿತಾಮಹಂ
ಅವಧಿಗಡಿಗೆ ಮಡಿವುದಂ ಕೇಳ್ದರಿಯಿರೆ, ಅದಲ್ಲದೆಯುಂ
ದಕ್ಷಾಧ್ವರದೊಳಾದಕ್ಷ ಪ್ರಜಾಪತಿಯ ಶಿರವನರಿದು
ಕುರಿಯದಲೆಯನೆತ್ತಿಸಿದ.
ಅದಲ್ಲದೆಯುಂ ಸುತೆಗಳುಪಿದ ವಿರಿಂಚಿ ಹತಿಸಿದಂದು,
ಅದಲ್ಲದೆಯುಂ, ಸಮಸ್ತ ದೇವತೆಗಳ ಆಹಾರ ತೃಪ್ತಿಗೆ ಬೇಹ
ಅಮೃತತರನಂ ಚರಣಾಂಗುಷ್ಠದಿಂದೊರಸಿದಂದು
ಅದಲ್ಲದೆಯುಂ, ವಿಷ್ಣು ತಾನೆಯೆನಿಪಿ ವಿಶ್ವಕ್ಸೇನನ
ತ್ರಿಶೂಲದಿಂದಿರಿದೆತ್ತಿ ಹೆಗಲೊಳಿಟ್ಟಂದು
ಅದಲ್ಲದೆಯುಂ, ಮತ್ಸ್ಯ ಕೂರ್ಮ ವರಾಹ
ನಾರಸಿಂಹ ತ್ರಿವಿಕ್ರಮಾದಿಗಳಂ ಮುಂದುವರಿದುಕೊಂದಂದು
ಅದಲ್ಲದೆಯುಂ, ದೇವದ್ವಿಜರಿಗೆ ಗುರುವೆನಿಸುವ ಪಾವಕನ
ಏಳು ನಾಲಿಗೆಗಳ ಕೀಳುವಂದು
ಅದಲ್ಲದಡೆಯುಂ, ಯಜ್ಞವಾಟದೊಳು ಪ್ರಾಜ್ಞನೆನಿಸುವ
ಪೂಶಾದಿತ್ಯನ ಹಲ್ಲಕಳದು ಭಾಗಾದಿತ್ಯನಂ ಮೀಂಟಿ
ವಾಣಿಯ ಮೂಗಂ ಮಾಣದೆ ಕೊಯ್ದು
ದೇವಮಾತೃಕೆಯರ ಮೊಲೆ ನಾಶಿಕವ ಚಿವುಟಿದಂದು,
ಅದಲ್ಲದೆಯುಂ, ಬ್ರಹ್ಮಾಂಡ ಕೋಟಿಗಳನ್ನೊಮ್ಮೆ
ನಿಟಿಲತಟನಯನಂ ಲಟಲಟಿಸಿ ಶೀಘ್ರದಿಂ ಸುಡಲು
ಸುರಾಸುರ ಮುನಿ ನಿವಹಾ ಹರಿ ಹಿರಣ್ಯಗರ್ಭರು
ಶತಕೋಟಿ ಹತವಾದಂದು
ಪೂರ್ದದಾ ಬ್ರಹ್ಮಹತ್ಯಂ ನಿರ್ಧರಮಾಗಿ
ಬೊಮ್ಮನ ಮೇಲ್ದಲೆಯೊಂದ ಚಿವುಟಿದುದರಿಂದಂ ಒಮ್ಮೆಯೆ
ಶೂಲಪಾಣಿಗೆ ಬ್ರಹ್ಮೋತ್ಪತಿಯಾದುದತಿ ಚೋದ್ಯ ಚೋದ್ಯ!
ಅದಲ್ಲದೆಯಾ ಬ್ರಹ್ಮ ಸಾಯನು
ಅಂಗಹೀನವಮಾದುದಲ್ಲದೆ ಹೋಗಲಾ
ಸಾಮಾನ್ಯ ತರ್ಕಿ ಕರ್ಮಗತ ಕರ್ಮಿಯೆನಿಸುವ ನಿನ್ನ

ಕರ್ಮವಾದವೆಲ್ಲಿಗೂ ಸಲ್ಲದು.
ಬ್ರಹ್ಮ ಮಸ್ತ[ಕ]ಧಾರಣ ಲೀಲಾಲೋಲಶೀಲ ಬ್ರಹ್ಮೇಶ್ವರ ಪರಬ್ರಹ್ಮ
ಶ್ರೀ ಮನ್ಮಹಾದೇವನ ನಾಮಕೀರ್ತನ ಮಂತ್ರದಿಂದಂ
ಬ್ರಹ್ಮಹತ್ಯಕೋಟಿಗಳುಂ
ಮಹಾಪಾತಕವಗಣಿತಂ ನೀರಿಗೆಣೆಯಾದದುಕೂಲಮಂ
ಭರದೊಳನಲ ಗ್ರಹಿಸಿದಂತಾಗುಮೆನೆ,
ಬ್ರಹ್ಮ ಪಂಚಬ್ರಹ್ಮಮೆನಲು ಬ್ರಹ್ಮ ಪಾಪಕಾಶಿಯೆನಲು,
ಶಿವಲಿಂಗ ದರ್ಶನ ಮಾತ್ರ ಬ್ರಹ್ಮ ಹತ್ಯವಳಿವವೆನಲು,
ಆ ಶಿವನೆ ಬ್ರಹ್ಮಹತಿ ಇದು ಯೆಂಬುದು ಮೊಲನ ಕೋಡಿನಂತೆ.
ಇದು ಕಾರಣ. ಕರ್ಮ ಶಿವನಾಜ್ಞೆ ವಿಡಿದು ಕರ್ಮಿಯ ಗ್ರಹಿಸೂದು.
ಕರ್ಮಸಾರಿಯಲಿ ಕರ್ಮ ನಿರ್ಮಲ ಕರ್ಮ ಕಾರಣ
ಕರ್ತೃವೆಂದರಿಯದಡೆ,
ಎಲೆ ಕರ್ಮವಾದಿ ನಿನಗೆ ಗತಿಯುಂಟೆ? ಎಂದುದು
ಬಸವಪ್ರಿಯ ಕೂಡಲಚನ್ನಸಂಗನ ವಚನ. ॥೧೩॥

೨೯೮

ಭಕ್ತಿಭಾಂಡದ ಶಿವಭಕ್ತರ ನಿಷೇಧವ ಮಾಡುವ
ಕರ್ಮಭಾಂಡದ ದ್ವಿಜರು ನೀವು ಕೇಳಿಭೋ!
'ಸತ್ಯಂ ಬ್ರೂಹ್ಯತಾ ಪಂಚಬ್ರಹ್ಮ ಇಂದ್ರಿಯನಿಗ್ರಹ' ಮೆಂದೋದಿ
ಗುದ್ದಿ ಗುದ್ದಿ ಹೋತನ ತಿಂಬುದಾವಾಚಾರವೊ ?
'ಪಿತಾಮಶ್ಚಾ ವೈಶ್ಯ ಕ್ಷತ್ರಿಯೋ ಪರಮೋಹರಿಃ
ಬ್ರಾಹ್ಮಣೋ ಭಗವಾನ್ ರುದ್ರಾಸರ್ವೇಶಮುತ್ತಮೋತ್ತಮಂ':
ಎಂಬ ಶ್ರುತಿಯ ನೋದಿ,
ತಮ್ಮ ಕುಲದೈವವಹ ಬ್ರಾಹ್ಮಣನಹ ರುದ್ರನ ನಿಂದಿಸಿ,
ತಮಗಿಂದ ಕೀಳುಜಾತಿಯಹ ಕ್ಷತ್ರಿಯ ಹರಿಯ ಆರಾಧಿಸುವ
ಕುಲಹೀನರು ನೀವು ಕೇಳಿಭೋ!
'ಜನ್ಮಾನಾಂ ಜಾಯತೇ ಶೂದ್ರಾ ಕ್ರಿಯಾಣಾಂ ದ್ವಿಜಮುಚ್ಯತೇ,'
'ವೇದಾಭ್ಯಾಸ ಭವೇ ವಿಪ್ರ ಬ್ರಹ್ಮಂ ಚರಂತಿ ಬ್ರಾಹ್ಮಣಂ'
ಎಂಬ ಶ್ರುತಿಯ ನೋದಿ,
ಪರಬ್ರಹ್ಮನಂತಹ ಶಿವಲಿಂಗಪೂಜೆಯನಾಚರಿಸಿ
ಬ್ರಾಹ್ಮಣತ್ವವನೈದಿದಡೆ ಶತಯಾಗಂಗಳ ಮಾಡಿ

ಶೂದ್ರನಹ ಇಂದ್ರುತ್ವವ ಬಯಸುವ
ಅಧಮರು ನೀವು ಕೇಳಿಭೊ!
'ಜನ್ಮನಾ ಜಾಯತೆ ಶೂದ್ರಾ ಮಾತಾಹಾ ಪ್ರಥಮ ಶೂದ್ರಾಣೆ
ನಚೋಪದೇಶ ಗಾಯತ್ರಿ ನಚಮುಂಚಿನ ಕ್ರಿಯಃ' ಎಂದುದಾಗಿ,
ದೀಕ್ಷೆಯಿಲ್ಲದೆ ಸತಿಶೂದ್ರಗಿತ್ತೆಗೆ ಹುಟ್ಟಿದವನೊಡನುಂಬ
ಅನಾಚಾರಿಗೆ ಎಲ್ಲಿಯದೊ ಬ್ರಾಹ್ಮಣತ್ವ ?
ಆವ ಜಾತಿಯವನಾದರೇನು ಶಿವಭಕ್ತನೆ ಬ್ರಾಹ್ಮಣ.
ಅದಕ್ಕೆ ಸಾಕ್ಷಿ
'ಸಾಂಖ್ಯಾಯ ಮಹಾಮುನಿ ತಪಸಾ ಬಾಹ್ಮಣದ್ಬುತ್ವಾ
ತಸ್ಯ ಜಾತಿನಕಾರಯೇತ್ ಶೇಪಗ್ರುಪ್ತ ಸಂಭೂತೋ
ಗೌತಮಸ್ಯಾ ಮಹಾಮುನಿ ತಪಸಾ ಬ್ರಾಹ್ಮಣದ್ಬುತ್ವಾ
ತಸ್ಯ ಜಾತಿಯೋತ್' ಎಂದುದಾಗಿ,
ತಮ್ಮ ತಮ್ಮ ಗೋತ್ರಂಗಳೆ ಸಾಕ್ಷಿಯಾಗಿ ಸಾರುತ್ತಿರಲು
ಕುಭ್ರಮೆಯಾತಕ್ಕೆ ?
'ಸ್ವಪಚೋಪಿ ಮುನಿಶ್ರೇಷ್ಠ ಶಿವಭಕ್ತಿ ಸಮ್ಮೇಳನಂ
ಶಿವಭಕ್ತಿ ವಿಹೀನಸ್ಯಾಂ ಶ್ವಪಚೋಪಿ ದ್ವಿಜಾನಾಂ' ಎಂದುದಾಗಿ
ಶಿವಭಕ್ತನೆ ಕುಲಜ, ಶಿವಭಕ್ತಿ ಇಲ್ಲದವನೆ ಸ್ವಪಚನೆಂದರಿಯದ
ಅಜ್ಞಾನಿಗಳು ನೀವು ಕೇಳಿಭೋ;
'ಏಕಮೇವ ರುದ್ರ ನಾದ್ವಿತೀಯಾಂ ಯತಸೇ' ಎಂದು
'ವೇದವನೋದಿ ಪಶುಪತಿಯೆನ್ನಮಃ' ಎಂದಾರುದ್ರವನೋದಿ
ಶಿವನೆ ಪತಿ ಮಿಕ್ಕಿನ ದೈವಂಗಳೆಲ್ಲ ಪಶುಗಳೆಂಬುದ ತಿಳಿದು
ಮತ್ತೆಯೂ ಈ ದ್ವಿಜರು ಕಾಣಲರಿಯರು.
ಹರಿಹರನೊಂದೆಯೆಂಬ ನರಗುರಿಗಳು ನೀವು ಕೇಳಿಭೋ;
ಪಾರಾಸ ಪುರಾಣೇ-
'ಆದಿ ರುದ್ರಾಂಗಮುತ್ಪತ್ತಿ ಮುಖೆ ಬ್ರಾಹ್ಮಣಮೀಶ್ವರಃ
ವಿಷ್ಣು ಕ್ಷತ್ರಿಯೋ ಮಿತ್ಯಾಹುರ್ಭಾಹುದೆಸೆವಸ್ಥಿತಃ
ವೈಶ್ಚಸ್ಯ ಬ್ರಹ್ಮಯಿತ್ಯಾಹುಜ್ಜಂಗರ್ದೆಸೆವೆವಸ್ಥಿತಃ
ಸುರಪಾಶೂದ್ರುಯಿತ್ಯಾಹು ಹೇ ದೇವಪಾದವವಸ್ಥಿತಃ' ಎಂದುದಾಗಿ,
ರುದ್ರನ ಮುಖದಲ್ಲಿ ಹುಟ್ಟಿದವನೆ ಬ್ರಾಹ್ಮಣ,
ಮಿಕ್ಕಾದ ವಿಪ್ರರೆಲ್ಲರು ಋಷಿಗೋತ್ರದಲ್ಲಿ ಹುಟ್ಟಿದರು.
ಆ ಋಷಿಮೂಲದ ವಿಪ್ರರೆಲ್ಲರು ಅಧಮಜಾತಿ.

ಅಧಮಜಾತಿಯಾದರೇನು ರುದ್ರಭಕ್ತರಾದ ಕಾರಣ ಬ್ರಾಹ್ಮಣರಾದರು.
ಈ ವರ್ಮವನರಿಯದ ಚಾಂಡಾಲ ವಿಪ್ರರ್ಗೇನೂ ಸಂಬಂಧವಿಲ್ಲ.
ಕಾಕರುದ್ರನ ಮುಖದಲ್ಲಿ ಉದ್ಭವವೆಂಬುದಕ್ಕೆ
'ಶ್ವಾನ ಸೂಕರ ಗೃಹೆ ವೃತಾಪಿಂಡಂತಿ ಪ್ರಸಿದ್ಧಿತಃ
ಪ್ರೇತತ್ವಂ ಚಸದಂತಸ್ಯಾ ತಥಾ ಧರ್ಮೇಣಲೋಪ್ಯತೇ'
ಎಂದುದಾಗಿ ಆಗಮಾರ್ಥವನರಿಯದೆ
ಪ್ರೇತಪಿಂಡವನಿಕ್ಕುವ ಪಾತಕರು,
'ಅಪಾನಾಯಸ್ವಾಹಾ ವ್ಯಾನಾಸ್ವಾಹಾ ಉದಾನಸ್ವಾಹಾ
ಸಮಾನಾಯ ಸ್ವಾಹಾ' ಎಂದು
ಭೂತಬಲಿಯ ಬೆಕ್ಕು ನಾಯಿಗೆ ಹಾಕಿ
ಮಿಕ್ಕ ಭೂತಶೇಷವಕೊಂಬ ಆ ಕುಲಜರು, ನೀವು ಕೇಳಿಭೋ!
'ವಸು ರೂಪೇಭ್ಯೋ ಮಧ್ಯಪಿಂಡಸ್ತು ಪುತ್ರಪೌತ್ರ ವರ್ಧನಃ'ಎಂದು,
ರುದ್ರಪ್ರಸಾದವನೆ ಕೊಂಡು, ರುದ್ರಪಿಂಡದಿಂದ ಹುಟ್ಟಿ,
ದೀಕ್ಷಾಕಾಲದಲ್ಲಿ ಭಸಿತವ ಧರಿಸಿ,
ಬ್ರಹ್ಮಕಪಾಲ ಪಾತ್ರೆಯ ಪಿಡಿದು, ಪಾಲಸಕಂಕಾಳದಂಡಮಂ ಪಿಡಿದು,
'ಭವತಿ ಭಿಕ್ಷಾಂದೇಹಿ'ಯೆಂದು ಭಿಕ್ಷಮಂ ಬೇಡಿ
ಪಿತೃಕಾರ್ಯದಲ್ಲಿ ವಿಶ್ವದೇವಸ್ತಾಪನೀಯಯೆಂದರ್ಚಿಸಿ,
ಮರಣಕಾಲದಲ್ಲಿ ರುದ್ರಭೂಮಿಯಲ್ಲಿ ರುದ್ರಾಗ್ನಿಯಿಂದ ದಹನ
ರುದ್ರವಾಹನವ ಬಾಲವಿಡಿದು ಸ್ವರ್ಗವನೆಯ್ದಿದರು
ರುದ್ರಭಕ್ತಿ ವಿರುದ್ಧ ವಿಚಾರಹೀನರು.
'ತ್ರಿಯಾಯುಷಂ ಜಮದಗ್ನಿ ಕಶ್ಯಪ ತ್ರಿಯಾಯುಷಂ,
ಆಗಸ್ತ್ಯಸ್ಯ ತ್ರಿಯಾಯುಷಂ ಶತಾಯುಷಂ' ಎಂದು
ಸಕಲ ಋಷಿಗಳು ಶ್ರೀ ವಿಭೂತಿಯನು ಧರಿಸಿ,
ಬಾಳಾಯುಷ್ಯಮಂ ಪಡೆದರೆಂದು,
ಮತ್ತೆಯು, ಯಜುಸ್ಸಿನಲ್ಲಿ ದೀಕ್ಷೆವನ್ನೈದಲ್ಲಿ,
'ಭೂತವಾಂವಪ್ರಿಯಾಮದಿತವ್ಯಮಂ'ಯೆಂದು,
ಶ್ರೀ ವಿಭೂತಿಯನೆ ಧರಿಸ ಹೇಳಿತ್ತು ವೇದವು.
'ಗೋಪಿ ಮಲಿನದಾರಿತ್ತು ಶಿವಂ ಪೂಸತಿಯೋದ್ವಿಜಃ
ಸೈಥಾ ವಿಂಶತಿಕುಲಂ ಸಾಕ್ಷಾಯ ನರಕಂ ಪ್ರಜೇತ್' ಎಂದು,
ಗೋಪಿ ಮಲಿನ ಚಂದನವನಿಟ್ಟು ಪಾತಕರು ಶಿವಲಿಂಗವ ಮುಟ್ಟದರೆ
ತಮ್ಮಿಪ್ಪತ್ತೊಂದು ಕುಲಸಹಿತ

ಕೇಡಿಲ್ಲದ ನರಕದಲ್ಲಿ ಬೀಳುವರೆಂದರಿಯದೆ
ಮುಟ್ಟಿಯನಿಟ್ಟ ಭ್ರಷ್ಟರು,
ಮತ್ಸಕೂರ್ಮವರಾಹ ನಾರಸಿಂಹ ಈ ನಾಲ್ಕೂ ಅವತಾರದಲ್ಲಿ
ಭೂಮಿ ಮಳೆ ಬೆಳೆ ತೊರೆ ಉಂಟೆಂಬುದನರಿದು
ಮುಂದೆ ವಾಮನಾವತಾರದಲ್ಲಿ ನೀರಿಂದ
ಬಲಿ ಧಾರೆಯನೆರೆದನೆಂಬುದನರಿದು
ವಿಷ್ಣುವಿನ ಪಾದದಲ್ಲಿ ಗಂಗೆ ಹುಟ್ಟಿತೆಂಬ ವಿಚಾರಹೀನರು
'ವಿಯಾ ವಿಷ್ಣುಪದಂ ವಾತು ಪುಂಸ್ಯಾಕಾಸ ವಿಹಾಯಸಿ
ವಿಗಾಶೋಪ್ಯನಾಕೋಪಿ ತ್ಯುರಪಿಸ್ಯಾದವ್ಯಯಂ'ಎಂದು
ನಿಘಂಟಿನಲ್ಲಿ ಆಕಾಶದ ಹೆಸರು ವಿಷ್ಣುಪದಿ
ಆಕಾಶಗಂಗೆ ಮುನ್ನಲುಂಟೆಂಬುದನರಿತು,
ವಿಷ್ಣುವಿನ ಕಾಲಲ್ಲಿ ಗಂಗೆ ಹುಟ್ಟಿತೆಂಬದುಷ್ಟರು,
ವೇದಕ್ಕೆ ನೆಲೆಗಟ್ಟು ಓಂಕಾರ, ಬ್ರಾಹ್ಮಣಕ್ಕೆ ನೆಲೆಗಟ್ಟು ಗಾಯತ್ರಿಯಲ್ಲಿ
ಶಿವನೆ ದೈವವೆಂದಿತ್ತು.
"ಓಂ ಭು ಓಂ ಭವಃ ಓಂ ಸ್ವಾಹಾಃ ಓಂ ಜನಹಃ
ಓಂ ತಪಹಾ ಓಂ ಸತ್ಯಹಾ ಓಂ ತತ್ಸವಿತೂರ್ವರೇಣ್ಯಂ
ಭರ್ಗೋದೇವಸ್ಯಾದಿ ಮಹಿದಿಯ್ಯೋ ನ ಪ್ರಜಯೋದಯಾತ್".
ಹರ ಹರಿಭಕ್ತನೆಂದೆನಿಸುವ ವಿಚಾರಹೀನರು ನೀವು ಕೇಳಿಭೋ !
ಹರಿ ಶಿವನ ಭಕ್ತನೆಂಬುವದಕ್ಕೆ, ಸಾವಿರಕಮಲ ಕೊರತೆಗೆ
ತನ್ನ ನಯನ ಕಮಲಮಂ ಕಳೆದು ಶಿವನಂಘ್ರಿಗರ್ಪಿಸಿ,
ಚಕ್ರಮಂ ಪಡೆದನೆಂದು ಮಹಿಮ್ನದಲ್ಲಿ,
'ಹರಸ್ತೇ ಸಹಸ್ರ ಕಮಲ ಬಲಿಮದಾಯ ಪದಯೋಃ' ಎಂದೋದಿ
ಮರೆದ ಮತಿಭಷ್ಟರು ನೀವು ಕೇಳಿಭೋ !
ಹರನೆ ಕರ್ತ, ಹರಿಯೆ ಭೃತ್ಯನೆಂಬುದಕ್ಕೆ
ರಾಮಪ್ರತಿಷ್ಠೆ ಶಿವಲಿಂಗವ ಮೂರ್ತಿಗಳಿಂ ಕಾಣರೆ,
ಕಂಡು ತಿಳಿಯಲರಿಯದ ಹುಲು ಮನುಜರು
ಶ್ರೀರಾಮನ ಗುರು ವಶಿಷ್ಠ,
ಹಂಪೆಯಲ್ಲಿ ವಿರೂಪಾಕ್ಷಲಿಂಗನ ಭಕ್ತನೆಂದರಿದು,
ಕೃಷ್ಣಾ ವಿಷ್ಣುವಿನ ಗುರು ಉಪಮನ್ಯು
ಅಹಿಪುರದಲ್ಲಿ ಸೋಮೇಶ್ವರಲಿಂಗನ ಭೃತ್ಯನೆಂಬುದನರಿದು
ಇಂತು, ಭೃತ್ಯನ ಶಿಷ್ಯಂಗೆ ಕರ್ತನ ಸರಿಯೆಂಬ

ಕರ್ಮಚಂಡಾಲರು ನೀವು ಕೇಳಿಭೋ;
'ಅಸಂಖ್ಯಾತ ಕೋಟಿ ಬ್ರಹ್ಮಾನಾಂ ಕೋಟಿ ವಿಷ್ಣುಗಳಂ ತಥಃ
ಗಂಗೆವಾಳುಕ ಸಮುಯಿಂಡಾ ಕಿಂಚಿಧ್ಯಾನಮಹೇಶ್ವರಾ'
ಎಂದು ರುದ್ರನ ಎವೆಯಾಡುವನಿತಕ್ಕೆ
ಲೆಕ್ಕವಿಲ್ಲದ ಕೋಟಿ ಬ್ರಹ್ಮವಿಷ್ಣರು ಸತ್ತುಹೋದರೆಂದು
ಓದಿ ತಿಳಿದು, ಇಂಥಹುಲುದೈವಂಗಳ
'ಮೃತ್ಯುಂಜಯ ನಿತ್ಯನೇಕೋದೇವನದ್ವಿತೀಯ'
ಎಂದೆನಿಸುವ ಶಿವಗೆ ಸರಿಯೆಂದೆನಿಸುವ ಭವಿವಿಪ್ರರಿಗೆ
ತಾವು ಓದುವ ವೇದಾಗಮಂಗಳು ತಮಗೆ ಹಗೆಯಾಗಿ
ನಡೆಯೊಂದು ಪರಿ ನುಡಿಯೊಂದು ಪರಿ ಆಗಿಹುದು.
ಅದೆಂತೆಂದರೆ ಗೌತಮ ದಧೀಚಿ ಭೃಗುವಾದಿಯಾಗಿ ಹಿರಿಯರುಗಳೇ
ಶಾಪದಿಂದ ಶಾಪಹಿತರಾಗಿ ಶಿವದ್ರೋಹಿಗಳಾಗಿ
ನರಕಕ್ಕಿಳಿವ ಚಾಂಡಾಲರಿಂದ ವಿಪ್ರರ ಸತ್ಪಾತ್ರರೆಂದಾರಾಧಿಸುವರ
ನರಕದ ಕುಳಿಯೊಳು ಮೆಟ್ಟಿ,
ನರಕಾಗ್ನಿಯಿಂದ ಸುಡುತಿರ್ಪ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.
॥೧೪॥

೨೯

ಹರನಲ್ಲದೆ ದೈವವಿಲ್ಲೆಂದು ಶ್ರುತಿ ಸಾರುತಿರ್ದು,
ವೇದಂಗಳು ಪೊಗಳುತಿರ್ದು, ನರರು ಅರಿದಿರ್ದು ಅರಿಯದೆ
ಹರಿಯೆ ದೈವ, ಬ್ರಹ್ಮನೆ ದೈವ, ಸುರಪನೆ ದೈವ,
ಮನುಮುನಿ ತ್ರಿವಿದಾದಿ ದೇವರ್ಕಳೆ ದೈವವೆಂದು,
ಚಂದ್ರಸೂರ್ಯರೆ ದೈವವೆಂದು ಅರಾಧಿಸುವಿರಿ.
ಪತಿವ್ರತೆಯಾದವಳು ತನ್ನ ಪುರುಷನ ನೆನವಳಲ್ಲದೆ ಅನ್ಯರ ನೆನೆವಳೆ ?
ವೇಶೆಯಂತೆ ಹಲಬರು ನೆಂಟರು, ಇವರೆಲ್ಲರ ಸಂತವಿಟ್ಟು
ಮತ್ತೆ ಶಿವನೆಂಬ ಶಿವದ್ರೋಹಿಗಳು ಕೇಳಿರೊ,
ಹರಿಯೆ ದೈವವೆಂದು ಆರಾಧಿಸಿದವರೆಲ್ಲರು
ತಮ್ಮ ಸಿರಿಯ ನೀಗಿ ಶಿವನಲ್ಲಿಗೆ ಸಲ್ಲದೆ ಹೋದರು.
ಮನುಮುನಿ ತ್ರಿವಿದಾದಿ ದೇವರ್ಕಳು
ದೈವವೆಂದು ಆರಾಧಿಸಿದವರೆಲ್ಲರು ಇಹಪರಕ್ಕೆ ಸಲ್ಲದೆ ಹೋದರು.
ಚಂದ್ರಸೂರ್ಯರೆ ದೈವವೆಂದು ಆರಾಧಿಸಿದವರೆಲ್ಲರು
ಹಿಂದು ಮುಂದಾಗಿ ಅಡ್ಡಬಿದ್ದು, ಅವರು

ಬಂದ ಬಂದ ಭವಕ್ಕೆ ಕಡೆಯಿಲ್ಲ,
ಇದನ್ನೆಲ್ಲ ಅರಿದಿರ್ದು ಮತ್ತೆ ಇವರೆ ದೈವವೆಂದು
ಆರಾಧಿಸುವವಂತ ಭವಬಂಧಧಾರಿಗಳ ನುಡಿಯ ಕೇಳಲಾಗದು,
ಅವರೊಡನೆ ನುಡಿಯಲಾಗದು ಅವರೊಡನೆ
ಒಂದಾಸನದಲ್ಲಿ ಕುಳ್ಳಿರಲಾಗದು.
ಅವರ ನಡೆಯ ಕಂಡರೆ ಛಿ ಎಂಬರು ನಮ್ಮ ಶರಣರು
ಬಸವಪ್ರಿಯ ಕೂಡಲಚನ್ನಸಂಗಮದೇವಾ. ॥೧೫॥

೩೦೦

ಹರಿಬ್ರಹ್ಮ ಕಾಲಕಾಮ ದಕ್ಷಾದಿಗಳ ದೇವರೆಂದು
ಗಟಿಯತನದೊಳಗೆ ಬಗುಳುವ ಮಿಟ್ಟೆಯ ಭಂಡರು ನೀವು ಕೇಳಿರೊ·
ಅವರ ಹುಟ್ಟನರಿಯಿರಿ ಅವರ ಹೊಂದುನರಿಯಿರಿ;
ಅವರ ಹುಟ್ಟು ಕೇಳಿರಣ್ಣ :
ಪೃಥ್ವಿ ಅಪ್ಪು ತೇಜ ವಾಯು ಆಕಾಶ
ಪಂಚತನು ಅಷ್ಟಮೂರ್ತಿಗಳಿಲ್ಲದಂದೂ
ಏನು ಏನೂ ಇಲ್ಲದಂದು
ಶೂನ್ಯ ನಿಃಶೂನ್ಯಕ್ಕೆ ನಿಲುಕದ ಘನವು
ಭಾನುಕೋಟಿ ಚಂದ್ರಸೂರ್ಯರ ಬೆಳಗಾಗಿ ಬೆಳಗುತಿಪ್ಪಲ್ಲಿ,
ಓಂಕಾರವೆಂಬ ನಿರಕ್ಷರ ಪುಟ್ಟಿತ್ತು.
ಓಂಕಾರದಿಂದ ನಕಾರ ಮಕಾರ ಶಿಕಾರ ವಕಾರ
ಯಕಾರವೆಂಬ ಪಂಚಾಕ್ಷರಿ ಪುಟ್ಟದವು.
ಆ ಪಂಚಾಕ್ಷರಿಗೆ ಪರಾಶಕ್ತಿರೂಪಾದಳು.
ಆ ಪಂಚಾಕ್ಷರಿ ಪರಾಶಕ್ತಿ ಇಬ್ಬರಿಗೆ ಸದಾಶಿವನಾದ.
ಸದಾಶಿವಂಗೆ ಜ್ಞಾನಶಕ್ತಿಯಾದಳು.
ಆ ಸದಾಶಿವಂಗೂ ಜ್ಞಾನಶಕ್ತಿಗೂ ಶಿವನಾದ.
ಶಿವಂಗೆ ಇಚ್ಛಾ ಶಕ್ತಿ ಯಾದಳು.
ಶಿವಂಗೂ ಇಚ್ಛಾಶಕ್ತಿ ಇಬ್ಬರಿಗೆಯೂ ರುದ್ರನಾದ.
ರುದ್ರಂಗೆ ಕ್ರಿಯಾಶಕ್ತಿಯಾದಳು.
ರುದ್ರಂಗೂ ಕ್ರಿಯಾಶಕ್ತಿ ಇಬ್ಬರಿಗೆಯೂ ವಿಷ್ಣುವಾದ.
ವಿಷ್ಣು ಮಹಾಬ್ರಹ್ಮನೆಂದು ಕೊಟ್ಟ ವೇದಶಾಸ್ತ್ರ ದೀಕ್ಷೆಯನ್ನು
ಮತ್ತೆ ನಮ್ಮ ಶಿವನ ಸೇವೆಯ ಮಾಡೆಂದರೆ

ಹೊತ್ತ ನೀರು ಹಿಡಿದ ಕಸಿಕೀಲು ಸಹಿತ ಏಳುಕೋಟಿಯು ಏಳುಲಕ್ಷವು.
ಏಳುಸಾವಿರದ ಏಳುನೂರಯೆಪ್ಪತ್ತೇಳು ವರುಷ ಕಂಕುಳ
ತಿತ್ತಿಯಲ್ಲಿ ನೀರಂ ತಂದು ಶಿವನ ರಾಜಂಗಳವ ಥಳಿಯಂಗೊಟ್ಟು,
ಬೋಹರಿಗೆಯಿಂದುಡುಗಿ ಪೃಥ್ವಿಯಂ ಸೌಖ್ಯವಂ ಮಾಡಿ
ಗಿರುಗಟೆಯಂ ಪಿಡಿದು ಕುಣಿದಾಡಿ ಶಿವನನರ್ಚಿಸಿ
ಸೇವೆಯಂ ಮಾಡಲು,
ಭೂತಂಗಳಟ್ಟಿ ಕಾಡಲು ಶಿವನ ಪಾದರಕ್ಷೆಯಂ ತಲೆಯಲ್ಲಿ ಹೊತ್ತು.
ಶಿವನ ದಾಸನೆಂದು ನಾಮವ ತಾಳಿ,
ಪ್ರಳಯಂಗಳಿಗಂಜಿ ವೇಷಮಂ ತೊಟ್ಟು,
ಸತಿ ಲಕ್ಷ್ಮಿ ಗರುಡವಾಹನ ಶಂಖಚಕ್ರವಂ ಕೊಟ್ಟು
ವೈಕುಂಠಕ್ಕೆ ಒಡೆಯನಾಗಿ ಇರುತಿಪುದೆಂದು ನಿರೂಪವಂ ಕೊಡಲು,
ಆ ದಾಸನಿಂತೆಂದನು; ಎಲೆ ದೇವ ನಿಮ್ಮ ನರ್ಚಿಸಿದಾ
ಕುರುಹೆನಗಧಿಕ ಫಲವೆಂದು
ಹಿಂದಣವೇಷದಲ್ಲಿ ಪೂಜೆಗೊಂಬೆನೆಂದು
ಕೈಬೋಹರಿಗೆ ಕಂಕುಳತಿತ್ತಿ ಶಂಖ ಗಿರುಗಟೆಯಂ ಪಿಡಿದು
ಪಾದರಕ್ಷೆಯಂ ತಲೆಯಲ್ಲಿ ಹೊತ್ತು ಇಂತು ದಾಸನಾಮ ಪಿಂಗದೆ
ದಾಸನಾಗಿ ಇಹೆನೆಂದು ವರಮಂ ಬೇಡಿಕೊಂಡನು ವಿಷ್ಣು.
ಇನಿತು ಹಿಂದನರಿಯದೆ ಮುಂದೆ ವಿಚಾರಿಸದೆ
ಸರ್ವರೊಡೆಯ ನಮ್ಮ ಶಿವನ ಎಡದ ಗದ್ದುಗೆಯನೋಲೈಸುವ
ವೇಷನ ದೇವರೆಂದು ಗಳಹುವ ದೇಹಿಗಳಿರಾ ನೀವು ಕೇಳಿರೋ;
ಅದಂತಿರಲಿ,ಆ ವಿಷ್ಣುವಿಗೂ ಮಹಾಲಕ್ಷ್ಮಿಗೂ ಇಬ್ಬರಿಗೂ ಬ್ರಹ್ಮನಾದ.
ಆ ಬ್ರಹ್ಮಂಗೆ ಸರಸ್ವತಿಯ ಕೊಟ್ಟು ಬರೆವ
ಶಾನಬಾವಿಕೆಯ ಕೊಟ್ಟರು.
ಈ ಬರೆವ ಶಾನಬೋವನನು ದೊರೆಯ ಸರಿಯೆಂದು ನುಡಿವಾ
ಪಂಚಮಹಾಪಾತಕರಿರಾ ನೀವು ಕೇಳಿರೋ;
ಅದಂತಿರಲಿ,
ಬ್ರಹ್ಮಂಗೂ ಸರಸ್ವತಿಗೂ ಇಬ್ಬರಿಗೂ ಮನುಮುನಿ ದೇವರ್ಕಳಾದರು.
ಆ ದೇವರ್ಕಳಿಗೆ ಸಚರಾಚರವಾಯಿತ್ತು.
ಇಹಲೋಕಕ್ಕೆ ನರರು ಆಗಬೇಕೆಂದು ಬ್ರಹ್ಮ ಹೋಗಿ
ನಮ್ಮ ಶಿವನಿಗೆ ಬಿನ್ನಹವಂ ಮಾಡಲು,
ಹರನು ಪರಮ ಜ್ಞಾನದಿಂದ ನೋಡಿ

ತಮ್ಮ ಶರೀರದಿಂದಲೆ ನಾಲ್ಕು ಜಾತಿಯಂ ಪುಟ್ಟಿಸಿ
ಇಹಲೋಕಕ್ಕೆ ಕಳುಹಿದರು.
ಆ ಶಿವನ ಶರೀರದಲ್ಲಿಯೆ ಪುಟ್ಟಿದವರು,
ಶಿವನನೆ ಪೂಜಿಸಿ, ಶಿವನನೆ ಭಾವಿಸಿ ಶಿವನೊಳಗಾದರು,
ಅವರಿಂದಾದುದನರಿಯದೆ ಭವಭಾರಿಗಳು
ತಾವು ತಮ್ಮ ಹುಟ್ಟನರಿಯದೆ,
ಈ ತಟ್ಟು ಮುಟ್ಟಿಯಂ ಇಟ್ಟ ಭ್ರಷ್ಟರ ಕೇಳಿದರೆ,
ಹುಟ್ಟಿಸಿದಾತ ಬ್ರಹ್ಮದೇವರಲ್ಲವೆ, ರಕ್ಷಿಸುವಾತ ವಿಷ್ಣುದೈವವಲ್ಲವೆ,
ಶಿಕ್ಷಿಸುವಾತ ರುದ್ರದೈವವಲ್ಲವೆ ? ಎಂದು ಹೇಳಿದರು.
ಈ ಭ್ರಷ್ಟರ ಮಾತ ಕೇಳಿ ಕೆಟ್ಟಿತ್ತು ಜಗವೆಲ್ಲ !
ಆಗ ಮುಟ್ಟಿ ಶಿವನು ಕೊಟ್ಟು ಕಳುಹಿದ ಮಾಯೆ
ಮರಹೆಂಬ ಶಾಪವ ಅವಳು ಕಟ್ಟಿ ಕೆಡಹಿದಳು ಮೂಜಗವೆಲ್ಲವನು.
ಇವಳ ಕಟ್ಟಿಗೊಳಗಾದ ಬ್ರಹ್ಮರೆಲ್ಲ ಕೇಳಿರೊ,
ನಮ್ಮ ಶರಣರ ಸುದ್ದಿಯ ಬಸವಪ್ರಿಯ ಕೂಡಲಚನ್ನಸಂಗಮದೇವಾ.
॥೧೬॥

೩೦೧

ವೇದ ಸ್ವಯಂಭುವೆಂಬ ವಾದಿಗಳಿರಾ ನೀವು ಕೇಳಿರೆಲವೊ.
'ಏಕೋ ದೇವಃ ರುದ್ರ ನ ದ್ವಿತೀಯಃ'
ಎಂದು ನಂಬುವುದು ಕಾಣಿರಣ್ಣಾ.
ಓಂ ದ್ಯಾವ್ಯಾಭೂಮೀ ಜನಯನ್ ದೇವ
'ಏಕ ಏವ ರುದ್ರೋ ನ ದ್ವಿತೀಯಃ'
ಎಂದು ನಂಬುವುದು ಕಾಣಿರಣ್ಣಾ.
'ಚಕಿತಮಭಿಧತ್ತೇ' ಎಂದು ಶ್ರುತಿ ಸಾರುತ್ತೈದಾವೆ
ಜಗದ ಕರ್ತ ಕೂಡಲ[೧]ಸಂಗಮದೇವನೊಬ್ಬನೆ ಕಾಣಿರಣ್ಣಾ. ॥೧೭॥

೩೦೨

ಸಕಲ ನಿಃಕಲವ ಕೂಡಿಕೊಂಡಿಪ್ಪೆಯಾಗಿ
ಸಕಲ ನೀನೆ ದೇವ, ನಿಃಕಲ ನೀನೆ ಕಂಡಯ್ಯಾ.

೧+ ಚನ್ನ (ಮೂಲ)

ವಿಶ್ವತೋ ಚಕ್ಷು ನೀನೆ ದೇವ,
ವಿಶ್ವತೋ ಮುಖ ನೀನೆ ದೇವಾ,
ವಿಶ್ವತೋ ಬಾಹು ನೀನೆ ದೇವಾ,
ಕೂಡಲ[೧]ಸಂಗಮನೊಬ್ಬನೆ ದೇವ ಕಾಣಿರಣ್ಣಾ. ॥೧೮॥

೩೦೩

ಎತ್ತ ನೋಡಿದಡತತ್ತ ನೀನೆ ದೇವಾ,
ಸಕಲ ವಿಸ್ತಾರದ ರೂಹು ನೀನೆ ದೇವಾ,
ವಿಶ್ವತಸ್‌ಚಕ್ಷು ನೀನೆ ದೇವಾ,
ವಿಶ್ವತೋ ಮುಖ ನೀನೆ ದೇವಾ,
[೨]ವಿಶ್ವತೋ ಪಾದ ನೀನೆ ದೇವಾ,
ಕೂಡಲಸಂಗಮದೇವಾ.[೨] ॥೧೯॥

೩೦೪

ಜಲ ಕೂರ್ಮ ನಾಗ ಮೇದಿನಿ ಸಪ್ತಸಾಗರ
ಅಜಾಂಡಭಾಂಡ ಹರಿವಿರಂಚಿಗಳು
ನಿಮ್ಮ ಉದರದ ಕೊನೆಯ ಪ್ರಾಣಿಗಳಯ್ಯಾ!
ಕೂಡಲಸಂಗಯ್ಯನ ಮಹಾಮನೆಯಲ್ಲಿ
ಅಸ್ಥಿಗ್ರಾಹಕನೆಂಬ ಗಣೇಶ್ವರನ
ಇಚ್ಛಾಮಾತ್ರದಿಂದ ಜಗಜುಗವಯ್ಯಾ ! ॥೨೦॥

೩೦೫

ರುದ್ರ[೩] ಮುಖದಲ್ಲಿ, ವಿಷ್ಣು ಭುಜದಲ್ಲಿ,
[೪]ಜಂಘೆಯಲ್ಲಿ ಅಜ ಜನನವು[೪]
ಇಂದ್ರ ಪಾದದಲ್ಲಿ ಚಂದ್ರ ಮನದಲ್ಲಿ
ಚಕ್ಷುವಿನಲ್ಲಿ ಸೂರ್ಯ ಜನನವು.
ಮುಖದಲ್ಲಿ ಅಗ್ನಿಯು ಪ್ರಾಣದಲ್ಲಿ ವಾಯು

---

೧ + ಚೆನ್ನ (ಮೂಲ)
೨-೨ ಕೂಡಲಚೆನ್ನಸಂಗಮದೇವನೊಬ್ಬನೆ ದೇವಾ (ಮೂಲ)
೩ + ನ (ಮೂಲ), ೪-೪ × (ಮೂಲ)

ನಾಭಿಯಲ್ಲಿ ಅಂತರಿಕ್ಷವು.
ಶಿರದಲುದಯ ತೇತ್ತ್ರೀಸಕೋಟಿ ದೇವತೆಯರು.
ಪಾದತಳದಲ್ಲಿ ಭೂಮಿ ಜನನವು.
ಶ್ರೋತ್ರದಲ್ಲಿ ದಶದಿಕ್ಕುಗಳು
ಜಗವ ನಿಕ್ಷೇಪಿಸಿದ ಕುಕ್ಷಿಯಲ್ಲಿ, ಅಕ್ಷಯನಗಣಿತನು,
ಸಾಸಿರ ತಲೆ, ಸಾಸಿರ ಕಣ್ಣು, ಸಾಸಿರ ಕೈ, ಸಾಸಿರ ಪಾದ,
ಸಾಸಿರ ಸನ್ನಿಹಿತ ನಮ್ಮ ಕೂಡಲಸಂಗಯ್ಯ. ॥೨೧॥

೩೦೬

ವಿಶ್ವಾಧಿಕೋ ರುದ್ರನ ಹೊಗಳುತಿವೆ ಶ್ರುತಿಗಳು–
'ವಿಶ್ವರೂಪಾಯ ವೈ ನಮಃ', ಪರಮ ರೂಪನೆ ನಮೋ,
ಆದಿಯಾರೂಢ ಭಯಕರನೆ ನಮೋ,
ಹರಿಯನು ಹರಿಸಿದನೇ ಎಂದು ಶ್ರುತಿಯು ಸಾರುತ್ತಿರಲು–
ಸಂಹಾರಕಾರಣನೆ ನಮೋ, ನಮ್ಮ ಕೂಡಲಸಂಗಮದೇವಾ
ಮಹದ್ ಮಹದ್ಭ್ಯೋ ನಮಃ. ॥೨೨॥

೩೦೭

ಐದುದೆ ಬ್ರಹ್ಮನ ಕಪಾಲ ಕರದಲ್ಲಿ ?
ಐದುದೆ ವಿಷ್ಣುವಿನ ನಯನ ಪಾದದಲ್ಲಿ ?
ಐದುದೆ ಕಾಮನ ಸುಟ್ಟ ಭಸ್ಮ ಮೈಯಲ್ಲಿ ?
ಮುಖ ಮೂದಲೆಯೇಕಯ್ಯಾ, ಕೂಡಲಸಂಗಮದೇವಾ! ॥೨೩॥

೩೦೮

ಹರನ ಕೊರಳಲ್ಲಿಪ್ಪ ಕರೋಟಿಮಾಲೆಯ
ಶಿರದ ಲಿಖಿತವ ಕಂಡು ಮರುಳು ತಂಡಗಳು ಓದಿ ನೋಡಲು
ಇವನಜ ಇವ ಹರಿ ಇವ ಸುರಪತಿ ಇವ ಧರಣೇಂದ್ರ
ಇವನಂತಕನೆಂದು ಹರುಷದಿಂದ ಸರಸವಾಡಿತ್ತ ಕಂಡು
[ದರ] ಮುಕುಳಿತನಾಗಿ ನಕ್ಕ ನಮ್ಮ ಕೂಡಲಸಂಗಮದೇವ. ॥೨೪॥

೩೦೯

ಅದುರಿದವು ಪಾದಾಘಾತದಿಂದ ಧರೆ,
ಬಿರಿದುವು ಮುಕುಟ ತಾಗಿ ತಾರಕೆಗಳು,
ಉದುರಿದುವು ಕೈ ತಾಗಿ ಲೋಕಂಗಳೆಲ್ಲಾ!
'ಮಹಿಪಾದಾಘಾತಾದ್ ವ್ರಜತೆ ಸಹಸಾ ಸಂಶಯಪದಂ।
ಪದಂ ವಿಷ್ಣೋರ್ಭ್ರಾಮ್ಯದ್ ಭುಜಪರಿಘರುಗ್ಣ ಗ್ರಹಗಣಃ॥
ಮುಹುರ್ದ್ಯೌರ್ದಾಸ್ಥ್ಯ ಯಾತ್ಯನಿಭೃತಜಟ ತಾಡಿತತಟಾ।
ಜಗದ್ರಕ್ಷಾಯೈ ತ್ವಂ ನಟಿಸಿ ನನು ವಾಯ್ಯೈವ ವಿಭತಾ॥
ನಮ್ಮ ಕೂಡಲಸಂಗಮದೇವನಿಂದ ನಾಟ್ಯವನಾಡೆ. ॥೨೫॥

೩೧೦

ಆರುಕೋಟಿ ಬ್ರಹ್ಮರು ಮಡಿವಲ್ಲಿ
ನಾರಾಯಣಗೊಂದು ದಿನವಾಯಿತ್ತು.
ನಾರಾಯಣರೊಂದು ಕೋಟಿ ಮಡಿವಲ್ಲಿ
ರುದ್ರನ ಕಣ್ಣಿವೆ ಹಳಚಿತ್ತು.
ರುದ್ರಾವತಾರ ಹಲವಳಿವಲ್ಲಿ
ಕೂಡಲಸಂಗಮದೇವನೇನೆಂದು ಅರಿಯ. ॥೨೬॥

೩೧೧

ಒಬ್ಬ ಕೆಂಚ ಒಬ್ಬಕರಿಯ ಒಬ್ಬ ಶುದ್ಧ ಧವಳಿತನೆಂತಯ್ಯಾ ಲಿಂಗವೆ?
ಒಬ್ಬರಿಗೊಬ್ಬರು ಘನವೆಂಬರು; ಅದೆಂತಯ್ಯಾ?
ಒಬ್ಬರಿಗೊಬ್ಬರು ಹಿರಿದೆಂಬರು; ಅದೆಂತಯ್ಯಾ?
ಬ್ರಹರಿಗೆ ಪ್ರಳಯ,ವಿಷ್ಣುವಿಂಗೆ ಮರಣ ಉಂಟು
ನಮ್ಮ ಕೂಡಲಸಂಗಯ್ಯಂಗಿಲ್ಲ. ॥೨೭॥

೩೧೨

ಹರಿ ಹರನೊಂದೆ ಎಂದಡೆ ಸುರಿಯವೆ ಬಾಯಲ್ಲಿ ಬಾಲಹುಳುಗಳು?
ಹರಿಗೆ ಹತ್ತು ಪ್ರಳಯ ಬ್ರಹ್ಮಂಗೆ ಅನಂತ ಪ್ರಳಯ;
ಹರಂಗೆ ಪ್ರಳಯ ಉಂಟೆಂಬುದ ಬಲ್ಲಡೆ [ನೀವು] ಹೇಳಿರೆ?
ಪ್ರಳಯಾಪ್ರಳಯ ಅಂದಂದಿಂಗೆ
ಹಳೆಯ ಕೂಡಲಸಂಗಮದೇವ. ॥೨೮॥

೩೧೩

ಏಕಂ ಏಕವಾದ ವಸ್ತುವ ಲೋಕಾಲೋಕಂಗಳು ಅರಿಯವಾಗಿ.
ಸ್ಥೂಲಸೂಕ್ಷ್ಮ ದೇವರು ತ್ರಿಪುರವ ಸಾಧ್ಯವ ಮಾಡುವಲ್ಲಿ
ಆತನೀತನೆಂಬ ಭ್ರಮಿತ ಭೂತಪ್ರಾಣಿಗಳೆತ್ತ ಬಲ್ಲರಯ್ಯಾ ?
ಆತನ ಘನವನಾರೂ ಅರಿಯರಲ್ಲ!
ಚಿಟುಕು ಮೂನ್ನೂರರುವತ್ತು ಕೂಡಲೊಂದು ವಿಘಳಿಗೆ.
ಅಂಥ ವಿಘಗಳಿಗೆ ಅರುವತ್ತು ಕೂಡಲೊಂದು ಘಳಿಗೆ.
ಅಂಥ ಘಳಿಗೆ ಎಂಟು ಕೂಡಲೊಂದು ಜಾವ.
ಅಂಥ ಜಾವ ಎಂಟು ಕೂಡಲೊಂದು ಅಹೋರಾತ್ರಿ.
ಅಂಥ ಅಹೋರಾತ್ರಿ ಎಂಟುಕೂಡಲೊಂದು ಮಾಸ.
ಅಂಥ ಮಾಸ ಹನ್ನೆರಡು ಕೂಡಲೊಂದು ವರುಷ.
ಅಂಥ ವರುಷ ಅರುವತ್ತು ಕೂಡಲೊಂಬು ಸಂವತ್ಸರ.
ಅಂಥ ಸಂವತ್ಸರಂಗಳು ಮರಳಿಮರಳಿ ತಿರುಗಿ
ಈ ಪರಿಯಲ್ಲಿ ಕಾಲಚಕ್ರಂಗಳು ತಿರುಗುತ್ತಹವು.
ಇನ್ನು ಹದಿನೆಂಟು ಯುಗಂಗಳು ಅವಾವು ಎಂಡಡೆ–
೧. ಅನಂತ, ೨. ಅದ್ಭುತ, ೩. ತಮಂಧ. ೪. ತಾರಜ,
೫. ತಂಡಜ, ೬. ಭಿನ್ನಜ. ೭. ಭಿನ್ನಯುಕ್ತ, ೮. ಅವ್ಯಕ್ತ,
೯. ಅಮಂದಯುಕ್ತ, ೧೦. ಮಣಿರಣ, ೧೧. ಮನ್ಯರಣ,
೧೨. ವಿಶ್ವಾರಣ, ೧೩. ವಿಶ್ವವಸು, ೧೪. ಅಲಂಕೃತ, ೧೫. ಕೃತಯುಗ
೧೬. ತ್ರೇತಾಯುಗ, ೧೭. ದ್ವಾಪರಯುಗ, ೧೮. ಕಲಿಯುಗ.
ಇಂತೀ ಹದಿನೆಂಟು ಯುಗಂಗಳು ಕಾಲಚಕ್ರವಾಗಿ ತಿರುಗುತ್ತಿಹವು.
ಇದು ದೇವರು ಕಟ್ಟಿದ ಕಟ್ಟಳೆ.
ಆ ಯುಗ ಪ್ರಮಾಣು ಹೇಗೆ ಎಂದಡೆ,
ಅನಂತಯೆಂಬ ಯುಗದಲ್ಲಿ ಸದಾಶಿವನೆಂಬ ದೇವರು.
ಆ ಯುಗದ ಪ್ರಮಾಣು ಐದರ್ಬುದ ಆರುನೂರರುವತ್ತೆರಡು ಕೋಟಿ
ಮೂವತ್ತೊಂದು ಲಕ್ಷದ ನಾಲ್ಕು ಸಾವಿರ ವರುಷ
ವರ್ತಿಸಿ ನಡೆಯಿತ್ತು. ॥೧॥
ಅದ್ಭುತನೆಂಬ ಯುಗದಲ್ಲಿ ಆದಿಲಿಂಗದೇವರು
ಆ ಯುಗದ ಪ್ರಮಾಣು ಎರಡರ್ಬುದ
ಎಂಟನೂರ ಮೂವತ್ತೊಂದು ಕೋಟಿಯು
ಹದಿನೈದು ಲಕ್ಷ ಐವತ್ತೆರಡು ಸಾವಿರ ವರುಷ ವರ್ತಿಸಿ ನಡೆಯಿತ್ತು ॥೨॥

ತಮಂಧವೆಂಬ ಯುಗದಲ್ಲಿ ತೇಜೋಮಯನೆಂಬ ದೇವರು
ಆ ಯುಗದ ಪ್ರಮಾಣು ಒಂದರ್ಬುದ
ಸಾನೂರ ಹದಿನೈದು ಕೋಟಿಯುಂ ಐವತ್ತೇಳು ಲಕ್ಷ
ಇಪ್ಪತ್ತಾರು ಸಾವಿರ ವರುಷ ವರ್ತಿಸಿ ನಡೆಯಿತ್ತು. ||೩||

ತಾರಜವೆಂಬ ಯುಗದಲ್ಲಿ ಊರ್ಧ್ವಜತೇಶ್ವರನೆಂಬೊ ದೇವರು.
ಆ ಯುಗದ ಪ್ರಮಾಣು ಏಳನೂರ ಏಳು ಕೋಟಿ.
ಐವತ್ತೆಂಟು ಲಕ್ಷ ಎಂಬತ್ತೆಂಟು ಸಾವಿರ ವರುಷ
ವರ್ತಿಸಿ ನಡೆಯಿತ್ತು. ||೪||

ತಂಡಜವೆಂಬ ಯುಗದಲ್ಲಿ ಸರ್ವರಹಿತನೆಂಬ ದೇವರು.
ಆ ಯುಗದ ಪ್ರಮಾಣು ಮೂನ್ನೂರರುವತ್ಮೂರು ಕೋಟಿ
ಎಪ್ಪತ್ತೆಂಟು ಲಕ್ಷ ನಾಲ್ವತ್ನಾಲ್ಕು ಸಾವಿರ ವರುಷ
ವರ್ತಿಸಿ ನಡೆಯಿತ್ತು. ||೫||

ಭಿನ್ನಜನೆಂಬ ಯುಗದಲ್ಲಿ ಮುಖೇಶ್ವರನೆಂಬ ದೇವರು.
ಆ ಯುಗದ ಪ್ರಮಾಣು ನೂರಎಪ್ಪತ್ತಾರು ಕೋಟಿ
ತೊಂಬತ್ನಾಲ್ಕು ಲಕ್ಷದ ಎಪ್ಪತ್ತೆರಡು ಸಾವಿರ ವರುಷ
ವರ್ತಿಸಿ ನಡೆಯಿತ್ತು. ||೬||

ಭಿನ್ನಯುಕ್ತವೆಂಬ ಯುಗದಲ್ಲಿ ಪೀತಧರನೆಂಬ ದೇವರು.
ಆ ಯುಗದ ಪ್ರಮಾಣು ಎಂಬತ್ತೆಂಟು ಕೋಟಿ
ನಾಲ್ವತ್ತೇಳು ಲಕ್ಷ ಮೂವತ್ತಾರು ಸಾವಿರ ವರುಷ
ವರ್ತಿಸಿ ನಡೆಯಿತ್ತು. ||೭||

ಅವ್ಯಕ್ತವೆಂಬ ಯುಗದಲ್ಲಿ ಭೂತೇಶ್ವರನೆಂಬ ದೇವರು.
ಆ ಯುಗದ ಪ್ರಮಾಣು ನಾಲ್ವತ್ತುಕೋಟಿ ಇಪ್ಪತ್ಮೂರು ಲಕ್ಷ
ಅರುವತ್ತೆಂಟು ಸಾವಿರ ವರುಷ ವರ್ತಿಸಿ ನಡೆಯಿತ್ತು ||೮||

ಅಮಂದಯುಕ್ತ ಯುಗದಲ್ಲಿ ಪರಮೇಶ್ವರನೆಂಬ ದೇವರು.
ಆ ಯುಗದ ಪ್ರಮಾಣು ಇಪ್ಪತ್ತೆರಡು ಕೋಟಿ ಹನ್ನೊಂದು ಲಕ್ಷ
ಎಂಬತ್ನಾಲ್ಕು ಸಾವಿರ ವರುಷ ವರ್ತಿಸಿ ನಡೆಯಿತ್ತು. ||೯||

ಮಣಿರಣವೆಂಬ ಯುಗದಲ್ಲಿ ಹರಿಹರನೆಂಬ ದೇವರು.
ಆ ಯುಗ ಪ್ರಮಾಣು ಹನ್ನೊಂದುಕೋಟಿ ಐದುಲಕ್ಷ
ತೊಂಬತ್ತೆರಡು ಸಾವಿರ ವರುಷ ವರ್ತಿಸಿ ನಡೆಯಿತ್ತು. ||೧೦||

ಮಣಿರಣವೆಂಬ ಯುಗದಲ್ಲಿ ಪಂಚವಕ್ತ್ರನೆಂಬ ದೇವರು
ಆ ಯುಗದ ಪ್ರಮಾಣು ಐದುಕೋಟಿ ಐವತ್ತೆರಡುಲಕ್ಷ
ತೊಂಬತ್ತಾರು ಸಾವಿರ ವರುಷ ವರ್ತಿಸಿ ನಡೆಯಿತ್ತು. ॥೧೧॥

ವಿಶ್ವಾರಣವೆಂಬ ಯುಗದಲ್ಲಿ ಪ್ರಳಯಕಾಲನೆಂಬ ದೇವರು.
ಆ ಯುಗಪ್ರಮಾಣು ಎರಡುಕೋಟಿ ಎಪ್ಪತ್ತಾರುಲಕ್ಷ
ನಾಲ್ವತ್ತೆಂಟು ಸಾವಿರ ವರುಷ ವರ್ತಿಸಿ ನಡೆಯಿತ್ತು. ॥೧೨॥

ವಿಶ್ವಾವಸುವೆಂಬ ಯುಗದಲ್ಲಿ ಸಕಲಭರಿತನೆಂಬ ದೇವರು.
ಆ ಯುಗಪ್ರಮಾಣು ಒಂದುಕೋಟಿ ಮೂವತ್ತೆಂಟು ಲಕ್ಷ.
ಇಪ್ಪತ್ನಾಲ್ಕು ಸಾವಿರವರುಷ ವರ್ತಿಸಿ ನಡೆಯಿತ್ತು ॥೧೩॥

ಅಲಂಕೃತವೆಂಬ ಯುಗದಲ್ಲಿ ಸರ್ವೇಶ್ವರನೆಂಬ ದೇವರು.
ಆ ಯುಗಪ್ರಮಾಣು ಅರುವತ್ತೊಂಬತ್ತು ಲಕ್ಷ
ಹನ್ನೆರಡುಸಾವಿರ ವರುಷ ವರ್ತಿಸಿ ನಡೆಯಿತ್ತು. ॥೧೪॥

ತ್ರೇತಾಯುಗದಲ್ಲಿ ಲೋಕೇಶ್ವರನೆಂಬ ದೇವರು.
ಆ ಯುಗಪ್ರಮಾಣು ಹದಿನೇಳು ಲಕ್ಷ
ಇಪ್ಪತ್ತೆಂಟುಸಾವಿರ ವರುಷ ವರ್ತಿಸಿ ನಡೆಯಿತ್ತು. ॥೧೬॥

ದ್ವಾಪಾರಯುಗದಲ್ಲಿ ಶ್ರೀಮಹಾದೇವರು
ಆ ಯುಗಪ್ರಮಾಣು ಎಂಟುಲಕ್ಷ
ಅರುವತ್ನಾಲ್ಕುಸಾವಿರ ವರುಷ ವರ್ತಿಸಿ ನಡೆಯಿತ್ತು. ॥೧೭॥

ಕಲಿಯುಗದಲ್ಲಿ ಶ್ರೀಶೈಲದ ಮಲ್ಲಿಕಾರ್ಜುನದೇವರು.
ಆ ಯುಗ ಪ್ರಮಾಣು ನಾಲ್ಕು ಲಕ್ಷ
ಮೂವತ್ತೆರಡು ಸಾವಿರ ವರುಷ ವರ್ತಿಸಿ ನಡೆಯಿತ್ತು ॥೧೮॥

ಇಂತೀ ಹಂದಿನೆಂಟು ಯುಗಂಗಳು ಮೇಳೈಸಿದರೆ
ಒಂದು ನಿರ್ಬುದ ಒಂದರ್ಬುದ ಮೂನ್ನೂರಿಪ್ಪತ್ನಾಲ್ಕು ಕೋಟಿ
ಐವತ್ತೆರಡು ಲಕ್ಷ ಎಪ್ಪತ್ತಾರು ಸಾವಿರ ವರುಷ ವರ್ತಿಸಿ ನಡೆಯಿತ್ತು.
ಈ ಸಂವತ್ಸರ ಮರಳಿದತೆ ಒಂದು ಮಹಾಯುಗ.
ಆ ಮಹಾಯುಗ ಇಪ್ಪತ್ತೇಳು ಬಾರಿ ತಿರುಗಿದರೆ ಮನುವಿನ ರಾಜ್ಯ.
ಅಂಥ ಮನುವಿನ ರಾಜ್ಯ ಪದಿನಾಲ್ಕು ಬಾರಿ ತಿರುಗಿದರೆ
ಮನುವಿಗೆ ಪರವಾಯು; ಸುರಪತಿಗೆ ಒಂದುದಿನ.
ಅಂಥ ದಿನ ಮುನ್ನುರರುವತ್ತು ಕೂಡಲೊಂದು ವರುಷ.

ಅಂಥ ವರುಷ ಅರುವತ್ತುಕೂಡಲೆಂದು ಸಂವತ್ಸರ.
ಅಂಥ ಸಂವತ್ಸರ ಇಪ್ಪತ್ತೆಂಟು ಬಾರಿ ತಿರುಗಿದರೆ
ಸುರಪತಿಗೆ ಪರಮಾಯು.
ಆ ಸುರಪತಿಗೆ ಮೂವತ್ತೆರಡುಬಾರಿ ಪರಮಾಯು ತುಂಬಲು
ಬ್ರಹ್ಮಂಗೆ ಒಂದು ದಿನ.
ಅಂಥ ದಿನ ಮೂವತ್ತಾದರೆ ಒಂದು ಮಾಸ.
ಅಂಥ ಮಾಸ ಹನ್ನೆರಡಾದರೆ ಒಂದು ವರುಷ.
ಅಂಥ ವರುಷ ಅರುವತ್ತಾದರೆ ಒಂದು ಸಂವತ್ಸರ.
ಅಂಥ ಸಂವತ್ಸರ ನೂರಇಪ್ಪತ್ತುಬಾರಿ ತಿರುಗಿದರೆ
ಬ್ರಹ್ಮಂಗೆ ಪರಮಾಯು.
ಅಂಥ ಬ್ರಹ್ಮರು ಅರುವತ್ನಾಲ್ಕು ಬಾರಿ ತಿರುಗಿದರೆ
ಚಿಪ್ಪಜನೆಂಬಾತಂಗೆ ಒಂದು ಚಿಪ್ಪು ಸಡಿಲಿತ್ತು.
ಅಂಥಾ ಚಿಪ್ಪಜರು ಸಹಸ್ರಬಾರಿ ತಿರುಗಿದರೆ
ರೋಮಜಂಗೆ ಒಂದು ರೋಮ ಸಡಿಲಿತ್ತು.
ಅಂಥಾ ರೋಮಜರು ಮೂವತ್ತುಬಾರಿ ತಿರುಗಿದರೆ
ಮೀನಜಂಗೆ ಒಂದು ದಿನ.
ಅಂಥ ದಿನ ಮುನ್ನೂರರುವತ್ತಾದರೆ ಒಂದು ವರುಷ.
ಅಂಥ ವರುಷ ಅರುವತ್ತಾದರೆ ಒಂದು ಸಂವತ್ಸರ.
ಅಂಥ ಸಂವತ್ಸರ ಇಪ್ಪತ್ತಾದರೆ ಮೀನಜಂಗೆ ಪರಮಾಯು.
ಅಂಥ ಮೀನಜರು ನಾಲ್ವತ್ತು ಬಾರಿ ತಿರುಗಿದರೆ
ಪಾದಲೋಚನಂಗೆ ಒಂದು ದಿನ.
ಅಂಥ ದಿನ ಮೂನ್ನೂರರುವತ್ತಾದರೆ ಒಂದು ವರುಷ.
ಅಂಥ ವರುಷ ಅರುವತ್ತಾದರೆ ಒಂದು ಸಂವತ್ಸರ.
ಅಂಥ ಸಂವತ್ಸರ ನೂರ ಇಪತ್ತಾದರೆ
ಪಾದಲೋಚನಂಗೆ ಪರಮಾಯು.
ಅಂಥ ಪಾದಲೋಚನರು ಎಂಭತ್ತುಕೋಟಿ ಬಾರಿ
ತಿರುಗಿದರೆ ವಿಷ್ಣುವಿಂಗೆ ಒಂದು ದಿನ.
ಅಂಥಾ ದಿನ ಮೂವತ್ತಾದರೆ ಒಂದು ಮಾಸ.
ಅಂಥಾ ಮಾಸ ಹನ್ನೆರಡಾದರೆ ಒಂದು ವರುಷ.
ಅಂಥಾ ವರುಷ ಅರುವತ್ತು ಆದರೆ ಒಂದು ಸಂವತ್ಸರ.
ಅಂಥಾ ಸಂವತ್ಸರ ನೂರ ಇಪ್ಪತ್ತಾದರೆ

ಸಮಸ್ತ ಈರೇಳು ಲೋಕಕ್ಕೆ ಭೂತಸಂಹಾರ.
ಅಂಥಾ ಭೂತಸಂಹಾರ ಹದಿನೇಳು ಲಕ್ಷ ಇಪ್ಪತ್ತೆಂಟು ಸಾವಿರ
ಬಾರಿ ಮರಳಿದರೆ ಒಂದು ಜಲಪ್ರಳಯ,
ಅಂಥಾ ಜಲಪ್ರಳಯ ನೂರ ಇಪ್ಪತ್ತು ತುಂಬಿದರೆ
ವಿಷ್ಣುವಿಗೆ ಪರಮಾಯು.
ಅಂಥ ವಿಷ್ಣು ಸಹಸ್ರಬಾರಿ ಮರಳಿದರೆ
ರುದ್ರಂಗೆ ಒಂದು ನಿಮಿಷ.
ಆ ನಿಮಿಷದಲ್ಲಿ ಅತಳ ವಿತಳ ಸುತಳ
ಮಹೀತಳ ತಳಾತಳ ರಸಾತಳ ಪಾತಾಳಗಳೆಂಬ
ಕೆಳಗೇಳು ಲೋಕವು.
ಭೂಲೋಕ ಭುವರ್ಲೋಕ ಸುವರ್ಲೋಕ ಮಹರ್ಲೋಕ ಜನರ್ಲೋಕ
ತಪರ್ಲೋಕ ಸತ್ಯರ್ಲೋಕ ಇಂತೀ ಮೇಲೇಳು ಲೋಕಂಗಳೆಲ್ಲ
ಮುಳುಗಿ ಮಹಾಪ್ರಳಯದಲ್ಲಿ ರುದ್ರಲೋಕವಂದುಳಿಯಿತ್ತಯ್ಯ.
ಈ ಮಹಾಪ್ರಳಯ ಸಹಸ್ರ ಮರಳಿದರೆ ಒಂದು ದಿನ.
ಅಂಥಾ ದಿನ ಮುನ್ನೂರರುವತ್ತು ಅಂದರೆ ಒಂದು ವರುಷ.
ಅಂಥಾ ವರುಷ ಅರುವತ್ತು ಕೂಡಲು ಒಂದು ಸಂವತ್ಸರ.
ಅಂಥಾ ಸಂವತ್ಸರ ಸಹಸ್ರಕೋಟಿಬಾರಿ ತಿರುಗಿದರೆ
ರುದ್ರಂಗೆ ಪರಮಾಯು. ಅಂಥ ರುದ್ರರು[ಆಗಿ] ಹೋದರಯ್ಯ.
ಅವರಾರು ಎಂದರೆ, ಪಶುಪತಿ ಮಹಾದೇವ ಶಂಕರ
ಶಶಿಧರ ಗೌರೀಪತಿ ಈಶ್ವರ ಸದಾಶಿವ ಮಹಾರುದ್ರ ನೀಲಕಂಠ.
'ಯತ್ರಜೀವ ತತ್ರ ಶಿವ'. ಪಂಚವಕ್ತ್ರರೆಂಬವರು.
ಅಂದಿನ ದಿನಕ್ಕೆ ತಪೋರಾಜ್ಯವನುಂಡು ಗಣೇಶ್ವರರೆಂದೆನಿಸಿಕೊಂಡು
ಮರಳಿ ತಪಕೆ ಬಿಜಯಂಗೈದರು.
[ಇಂತೀ] ಲೋಕಂಗಳು [ಕೂಡಿ ಕೆಲವು ದಿನ ]ಶೂನ್ಯ ವರ್ತಿಸಿತ್ತು.
ಕೆಲವು ದಿನ ಕಾಳಂಧ ವರ್ತಿಸಿತ್ತು.
ಕೆಲವು ದಿನ ಭೂತಂಗಳು ವರ್ತಿಸಿದವು.
ಕೆಲವು ಯುಗದ ಮೇಲೆ ಅಂತಹ ದಿನಂಗಳು ಹೋದವಯ್ಯ.
ಅಂತಹ ಪ್ರಳಯ ಮಹಾಪ್ರಳಯವು ಹೋದವಯ್ಯ.
ಮಾಸಂಗಳು ಹೋದವಯ್ಯ. ಅಂಥ ವರುಷಂಗಳು ಹೋದವಯ್ಯ.
ಅಂತಹ ಸಂವತ್ಸರಂಗಳು ಹೋದವಯ್ಯ.
ಅಂಥ. ಕಾಲಂಗಳು ಹೋದವಯ್ಯ.

ಅಂತಹ ಪ್ರಳಯ ಮಹಾಪ್ರಳಯಂಗಳು ಹೋದವಯ್ಯ.
ಅಂಥ ದೇವರುಗಳು ಹೋದವಯ್ಯ.
ಬೆಳಗು ಮಹಾಬೆಳಗು ಪ್ರಕಾಶ ಮಹಾಪ್ರಕಾಶ
ಅಪ್ರಮಾಣು ಅಂತಿಂತೆನಲಿಲ್ಲ.
[1]ಗೋ[1]ಹೇರನೆಂಬ ಲಿಂಗವು ನಿರಾಳ ನಿರ್ಮಾಯ
ಎಂಬುದನಾರು ಅರಿಯರು.[2] ॥೨೦॥

೩೧೪

ರಾವಣ ಪಡೆದ ಲಿಂಗ, ಚಂದ್ರಾಯುಧ ಉರಿಹಸ್ತ
ಪಾರ್ವತಿ ಗಜಮುಖ ಮುಂತಾಗಿ ಕೃತಕದಿಂ ದೈತ್ಯರೊಯ್ಯೆ,
ಹರಿಯಜ ಹರನ ಕೊಲ್ಲುವೆನೆಂದಸುರನ
ಹೆಣ್ಣು ರೂಪಾಗಿ ಅವನ ಕೈಯಿಂದ ಅವನ ಸುಟ್ಟು,
ಇವರು ಮೊದಲಾದ ಶಿವದ್ರೋಹಿಗಳ ಹರಿ ಸಂಹರಿಸಿದರೇನು ?
ದೈತ್ಯರಂ ಗೆಲುವ ಸಾಹಸಮಂ, ಶಿವನು ತನ್ನ
ಭೃತ್ಯರ ಸಾಹಸಮಂ ಮೆರೆಸುವ
ಲೀಲಾ ವಿನೋದವಲ್ಲದೆ ಸ್ವತಂತ್ರವಿಲ್ಲ.
ಶಿವನ ಕೃಪೆಯಿಂದ ಪಡೆದು ಮಾಡುವರು;
ಭೃತ್ಯಜ್ಞಾನಕ್ಕದೇನು ಚೋದ್ಯ!
ಬಲೆಯೊಳಗೆ ಸಿಡಿಲುವಕ್ಕಿ ಬಿದ್ದರೆ
ಬೇಂಟೆಗಾರಗೆ ಸಾಧ್ಯವಾಗಬಲ್ಲುದೆ ?
ಮರಣರಹಿತ ಶಿವನ ಕೊಲಬಲ್ಲವರುಂಟೆ ?
ಸರ್ವಜ್ಞ ಶಿವನ ಸತಿಯು ಮತ್ತೊಬ್ಬರಾಳುವರುಂಟೆ ?
ಸೂತ್ರಿಕನಾಡಿಸುವಂತೆ ಆಡುವ ಬೊಂಬೆ
ಆ ಸೂತ್ರಿಕನ ತೋರಬಲ್ಲುದೆ ?
ಅದು ಕಾರಣ ಬ್ರಹ್ಮನಿಂದಲಾಯಿತು,
ವಿಷ್ಣುವಿನಿಂದಲಾಯಿತ್ತು ಮತ್ತೆ ಕೆಲವು ದೈವಂಗಳಿಂದ
ಆಯಿತ್ತೆಂಬ ಅಜ್ಞಾನಿಗಳ ಮಾತದಂತಿರಲಿ,
ಬ್ರಹ್ಮವಿಷ್ಣುಗಳು ಸ್ವತಂತ್ರರಾದರೆ
ಬ್ರಹ್ಮನ ತಲೆ ಹೋಗಲೇತಕ್ಕೆ ?

---

೧-೧ ಮಾ. (ಮೂಲ), ೨ + ಕೂಡಲಚನ್ನಸಂಗಮದೇವಾ (ಮೂಲ)

ಸರಸ್ವತಿಯು ಮೂಗು ಹೋಗಲೇತಕ್ಕೆ ?
ಬ್ರಹ್ಮನ ಮಗ ಸನತ್ಕುಮಾರ ಒಂಟಿಯಾಗಲೇತಕ್ಕೆ ?
ಹರಿಯ ಮಗನುರಿದು ಹೋಗಲೇತಕ್ಕೆ ?
ನಾರಸಿಂಹ ವಧೆಗೊಳಗಾಗಲೇತಕ್ಕೆ ?
ಕೃಷ್ಣನ ಹದಿನಾರುಸಾವಿರ ಸ್ತ್ರೀಯರ
ಹೊಲೆಬೇಡರು ಒಯ್ಯಲೇತಕ್ಕೆ ?
ಕಾಳು ಬೇಡನೆಚ್ಚಂಬು ತಾಗಿ
ಕೃಷ್ಣ ಗೋಳಿಟ್ಟು ಸಾಯಲೇತಕ್ಕೆ ?
ಅದು ಕಾರಣ, ನಮ್ಮ ಶಿವನು ಆಡಿಸಿದಂತೆ ಆಡಿ,
ಹುಟ್ಟೆಂದರೆ ಹುಟ್ಟಿ, ನಡೆಯೆಂದರೆ ನಡೆದು,
ನುಡಿಯೆಂದರೆ ನುಡಿದು, ಸಾಯೆಂದರೆ ಸತ್ತು,
ಏಳೆಂದರೆ ಎದ್ದು, ಕೆಡಹಿದಂತೆ ಬಿದ್ದಿಹ
ತೃಣಬೊಂಬೆಗಳಿಗುಂಟೆ ಸ್ವತಂತ್ರ? ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

೩೧೫

'ಶಿವಾತ್ಪರಂ ಪರಂ ಸೂಕ್ಷ್ಮಂ ನಿತ್ಯಂ ಸರ್ವಗತಂ ಮಯಂ
ಆನಂದಿತಮನುಪಮಂ ಅಪ್ರೇಯಮನಾಮಯಂ'
ಎಂದು ವೇದಾಗಮಗಳು ಹೇಳಿದ ಹಾಗೆ
ಶಿವಶಿವಾ ಹರಹರಾ ಎಂದೆನ್ನದೆ,
ಭೃಗು ಶಾಪದಿಂದ ಭವಕ್ಕೆ ಬಂದು ಸತ್ತುಕೆಟ್ಟು ಹೋದ
ದಶರಥರಾಯನು ನಾಚಿಕೆಯಿಲ್ಲದೆ;
ರಾಮ ರಾಮ ಎಂದು ನೆನೆದರೂ, ಆ ರಾಮ,
ರಾವಳನಕೊಂದು ಬ್ರಹ್ಮಹತ್ಯದೋಷಕ್ಕೆ
ಅನೇಕ ಶಿವಲಿಂಗಗಳ ಪ್ರತಿಷ್ಠೆಯಮಾಡಿ ಪೂಜಿಸಿದ.
ಹರಿಯು ಆ ಮಹಾಲಿಂಗವ ನೆನೆವುದಕ್ಕೆ
ನಾಲಗೆ ಮೂಗ ನಂಜುತ್ತ ಇಹನು.
ಕೃಷ್ಣನ ಅಂಗಾಲಕಣ್ಣ ಬೇಡನೆಚ್ಚು ಕೊಂದನೆಂದರೆ
ನಾಚವೆ ಪರಿಣಮಿಸುತ್ತಿಹರು.
ನಾರಸಿಂಹನವತಾರವ ಶರಭರುದ್ರ ಶೀರ್ಜಿಸಿವನೆಂದರೆ
ಉರಿದೇಳುತ್ತಿಹರು!
ಹರಿ ಗೋವಳರೊಡನುಂಡಯೆಂದರೆ

ಪರಿಣಮಿಸಿ ಸಂತೋಷವಹರು,
ಆ ಹರಿ ರಾಮೇಶ್ವರದೇವರ ಪ್ರಸಾದವ ಕೊಂಡನೆಂದರೆ
ಅನುಮಾನಿಸುತ್ತಿಹರು.
ಸತ್ತು ಕೆಟ್ಟು ಹುಟ್ಟಿದ ಅಜ್ಞಾನಿ ವಸುದೇವನ ಮಗ
ಹರಿಯೆಂಡರೆ ನಲಿದುಬ್ಬುವರು,
ಆ ಹರಿ ಮಹಾದೇವನ ಮಗನೆಂದರೆ ಸಿಡಿಮಿಡಿಗೊಂಬರು.
ಹಲವು ಗಂಡರ ನೆರೆದ ಕುಂತಿಯ ಕಾಲಿಗೆ
ಹರಿ ಎರಗಿದನೆಂದರೆ ನಲಿದುಬ್ಬಿ ಕೊಂಡಾಡುವರು.
ಆ ಹರಿ ಕಾಮಿತಫಲದಾಯ(ಕ)ನಾದ ಶಿವನ ಶ್ರೀಪಾದಕ್ಕೆ
ನಯನ ಕಮಲಮನರ್ಪಿಸಿ ಚಕ್ರಮಂ ಪಿಡಿದನೆಂದರೆ
ಚಿಂತಿಸಿ [ಕರ]ಕರಸುತ್ತಿಹರು.
ದ್ವಾರವತಿ ನೀರಿಲಿ ನೆರೆದಾಗ ಕೃಷ್ಣನ ಹದಿನಾರುಸಾವಿರ ಸ್ತ್ರೀಯರ
ಹೊಲೆಬೇಡರು ಸೆರೆಯನೊಯ್ದುದಕ್ಕಾಗಿ
ಹೀನ ಜಾತಿಯ ಬಸುರಲ್ಲಿ ಉತ್ತಮ ಸ್ತ್ರೀಯಲ್ಲಿ
ಹುಟ್ಟಿದವರೆಂದು ನಲಿದಾಡುವರು.
ಮಹಾಲಕ್ಷ್ಮಿ ಸರ್ವರೊಡೆಯ ಶಿವನ ದಾಸಿಯೆಂದರೆ
ಅಲಗು ತಾಕಿದಂತೆ ನೋವುತಿಹರು.
ಶಿವಲಿಂಗವ ತಪಧ್ಯಾನದಿಂದರ್ಚಿಸಿ ಪೂಜಿಸಿ
ಪಡೆದರು ಏಕಾದಶರುದ್ರರಾದಿಯಾದ ರುದ್ರಗಣಂಗಳು
ಬ್ರಹ್ಮವಿಷ್ಣುರುಗಳು ಇಂದ್ರಾದಿ ದಿಕ್ಪಾಲರು ರವಿಚಂದ್ರಾದಿಗಳು
ಶಿವನಪೂಜಿಸಿ ಕಾಮಿತಫಲಪದವಿಯ ಪಡೆದರಯ್ಯ
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ. ॥೩೦॥

೩೧.

ಬ್ರಹ್ಮದೇವರಾದರೆ ತಾನೇರುವ ಹಂಸೆಯಿಂದಲಿ ಬಿತ್ತಿ ಬೆಳೆದು
ಅದರ ಕ್ಷೀರಪ್ರಸಾದದಿಂದ ತೃಪ್ತರಾಗಿ
ಅದರ ಮೂತ್ರ ಹಿಕ್ಕೆಯಿಂದ ಪವಿತ್ರ ಪಾವನನಾಗನೇತಕ್ಕೆ ?
ವಿಷ್ಣು ತಾ ದೈವನಾದರೆ ತಾನೇರುವ ಗರುಡನಿಂದ ಬಿತ್ತಿ ಬೆಳೆದು
ಅದರ ಕ್ಷೀರ ಪ್ರಸಾದದಿಂದ ತೃಪ್ತರಾಗಿ
ಅದರ ಮೂತ್ರ ಹಿಕ್ಕೆಯಿಂದ ಪವಿತ್ರಪಾವನನಾಗಲೇತಕ್ಕೆ ?
ವಿನಾಯಕ ಭೈರವ ಮೈಲಾರ ಜಿನ ಇವರು ದೇವರಾದರೆ

ತಾವು ಏರುವ ಇಲಿ ಚೇಳು ಕುದುರೆ ಕತ್ತೆಗಳಲ್ಲಿ ಬಿತ್ತಿ ಬೆಳೆದು
ಅವರ ಕ್ಷೀರಪ್ರಸಾದದಿಂದ ತೃಪ್ತರಾಗಿ
ಅವರ ಮೂತ್ರದಿಂದ ಪವಿತ್ರರಾಗರೇತಕ್ಕೆ?
ಅಯ್ಯಾ, ಇಂತೀ ಭೇದವನರಿಯದ
ಅವಿಚಾರಿಹೀನರ ಮಾತದಂತಿರಲಿ,
ಬ್ರಹ್ಮರು ಇಂದ್ರ ದಿಕ್ಪಾಲಕರು ಮುಂತಾಗಿ
ಸಮಸ್ತ ದೇವರ್ಕಳೆಲ್ಲ ಕೊಂಬ ಉಂಬುದು
ಗೋ ವೃಷಭನ ಅಮೃತ ಪ್ರಸಾದ.
ಆ ಗೋಮಯದಿಂದ ಪಾವನ ಶುದ್ಧ.
ಆ ಮೂತ್ರದಿಂದ ಪವಿತ್ರಪಾವನ ಶುದ್ಧರಯ್ಯ.
ಆ ವೃಷಭನ ವಿಭೂತಿಯುಂ ಸಮಸ್ತ ದೇವತಾದಿಗಳು
ಸರ್ವಮುನಿ ಜನಂಗಳೆಲ್ಲ ಧರಿಸಿ ಬ್ರಹ್ಮತ್ವಂ ಪಡೆದು
ಮುಕ್ತಿಫಲಪದವಾಯಿತ್ತು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ. ॥೩೧॥

೩೧೬

ಆದಿ, ಅನಾದಿ, ಅನಾಗತ. ಅನಂತ, ಅದ್ಭುತ,
ತಮಂಧ, ತಾರಜ, ತಂಡಜ, ಬಿಂದುಜ.
ಭಿನ್ನಾಯುಕ್ತ, ಅವ್ಯಕ್ತ, ಅಮದಾಯುಕ್ತ,
ಮಣಿರಣ, ಮಾನ್ಯರಣ, ವಿಶ್ವಾರಣ, ವಿಶ್ವಾವಸು, ಅಲಂಕೃತ,
ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ–
ಇಂತೀ ಇಪ್ಪತ್ತೊಂದು ಯುಗಂಗಳ ನಿರ್ಮಿಸಿದಾತ ನಮ್ಮ ಬಸವಣ್ಣ.
ಪ್ರಥಮಯುಗದಲ್ಲಿ ಪೃಥ್ವಿ, ಅಪ್ಪು, ತೇಜ,
ವಾಯು, ಆಕಾಶಗಳಿಲ್ಲದಂದು
ಚಂದ್ರಸೂರ್ಯರು ಅಷ್ಟತನುಮೂರ್ತಿಗಳಿಲ್ಲದಂದು
ಆರಾರೂ ಇಲ್ಲದಂದು, ನಾಮವಿಲ್ಲದಂದು,
ಅಂದು ನಿಶ್ಶೂನ್ಯವಾಗಿದ್ದ ಕಾಣಾ ನಮ್ಮ ಬಸವಣ್ಣ.
ಅಂದು ನಿಮ್ಮ ನಾಭಿಕಮಲದಲ್ಲಿ ಜಲಪ್ರಳಯ ಪುಟ್ಟಿತ್ತು.
ಆ ಜಲಪ್ರಳಯದಲ್ಲಿ ಒಂದು ಗುಳ್ಳೆ ಲಿಂಗಾಕಾರವಾಗಿ ಪುಟ್ಟಿತ್ತು.
ಆ ಲಿಂಗವ ತಕ್ಕೊಂಡು ಸ್ಥಾಪ್ಯವಿಟ್ಟಾತ ನಮ್ಮ ಬಸವಣ್ಣನು

---

೧-೨ ಡಾತ (ಮೂಲ)

ಇಪ್ಪತ್ತನೆಯ ಯುಗದಲ್ಲಿ
ಓಂಕಾರವೆಂಬ ಮೇವ ಮೇದು, ಮೆಲುಕಿರಿದು
ಪರಮಾರ್ಥವೆಂಬ ಹೆಂಡಿಯನಿಕ್ಕಿ
ನೊಸಲ ಕಣ್ಣ ತೆರೆದು ನೋಡಲಾಗಿ ಆ ಹೆಂಡಿ ಭಸ್ಮವಾಯಿತ್ತು.
ಆ ಭಸ್ಮವನೆ ತೆಗೆದು ತಳಿಯಲಾಗಿ ಭೂಮಂಡಲ ಹೆಪ್ಪಾಯಿತ್ತು.
ಹೆಪ್ಪಾಗಲಿಕ್ಕಾಗಿ ತೊಡೆಯ ಮೇಲಿದ್ದ ಲಿಂಗವ ತಕ್ಕೊಂಡು
ಸ್ಥಾಪ್ಯವಿಟ್ಟಾತ ನಮ್ಮ ಬಸವಣ್ಣ.
[೩]ಹತ್ತೊಂಬತ್ತನೆಯ ಯುಗದಲ್ಲಿ
ಕತ್ತಲೆಯ ಕಾಳೋದರನೆಂಬ ರುದ್ರನ
ನಿರ್ಮಿಸಿದಾತ ನಮ್ಮ ಬಸವಣ್ಣ[೪].
ಹದಿನೆಂಟನೆಯ ಯುಗದಲ್ಲಿ
ಏಕಪಾದ ಮಾಹೇಶ್ವರನ ನಿರ್ಮಿಸಿದಾತ ನಮ್ಮ ಬಸವಣ್ಣ.
ಹದಿನೇಳನೆಯ ಯುಗದಲ್ಲಿ,
ಷಟ್ ಸ್ಥಲವ ನಿರ್ಮಿಸಿದಾತ ನಮ್ಮ ಬಸವಣ್ಣ.
ಹದಿನಾರನೆಯ ಯುಗದಲ್ಲಿ,
ಅಮೃತಮಥನವ ಮಾಡಿದಾತ ನಮ್ಮ ಬಸವಣ್ಣ.
ಹದಿನೈದನೆಯ ಯುಗದಲ್ಲಿ?
ಹದಿನಾಲ್ಕನೆಯ ಯುಗದಲ್ಲಿ
ತೆತ್ತೀಸಕೋಟಿ ದೇವರ್ಕಳ ನಿರ್ಮಿಸಿದಾತ ನಮ್ಮ ಬಸವಣ್ಣ.
ಹದಿಮೂರನೆಯ ಯುಗದಲ್ಲಿ
ಸೌರಾಷ್ಟ್ರ ಸೋಮೇಶ್ವರನ ನಿರ್ಮಿಸಿವಾತ ನಮ್ಮ ಬಸವಣ್ಣ.
ಹನ್ನೆರಡನೆಯ ಯುಗದಲ್ಲಿ
ಪಾರ್ವತಿ ಪರಮೇಶ್ವರನ ನಿರ್ಮಿಸಿದಾತ ನಮ್ಮ ಬಸವಣ್ಣ.
ಹನ್ನೊಂದನೆಯ ಯುಗದಲ್ಲಿ
ಏಕಾದಶ ರುದ್ರರ ನಿರ್ಮಿಸಿದಾತ ನಮ್ಮ ಬಸವಣ್ಣ.
ಹತ್ತನೆಯ ಯುಗದಲ್ಲಿ
ದಶವಿಷ್ಣುರ ನಿರ್ಮಿಸಿದಾತ ನಮ್ಮ ಬಸವಣ್ಣ.
ಒಂಬತ್ತನೆಯ ಯುಗವಲ್ಲಿ
ನವಬ್ರಹ್ಮರ ನಿರ್ಮಿಸಿದಾತ ನಮ್ಮ ಬಸವಣ್ಣ.

---

೩-೪ × (ಮೂಲ)

ಎಂಟನೆಯ ಯುಗದಲ್ಲಿ
ಅಷ್ಟದಿಕ್ಪಾಲರ ನಿರ್ಮಿಸಿದಾತ ನಮ್ಮ ಬಸವಣ್ಣ.
ಏಳನೆಯ ಯುಗದಲ್ಲಿ
ಸಪ್ತಸಮುದ್ರಗಳ ನಿರ್ಮಿಸಿದಾತ ನಮ್ಮ ಬಸವಣ್ಣ.
ಆರನೆಯ ಯುಗದಲ್ಲಿ
ಷಣ್ಮುಖದೇವರ ನಿರ್ಮಿಸಿದಾತ ನಮ್ಮ ಬಸವಣ್ಣ.
ಐದನೆಯ ಯುಗದಲ್ಲಿ
ಪಂಚಮುಖದೀಶ್ವರನ ನಿರ್ಮಿಸಿದಾತ ನಮ್ಮ ಬಸವಣ್ಣ.
ನಾಲ್ಕನೆಯ ಯುಗದಲ್ಲಿ
ಚತುರ್ಮುಖದ ಬ್ರಹ್ಮನ ನಿರ್ಮಿಸಿದಾತ ನಮ್ಮ ಬಸವಣ್ಣ.
ಮೂರನೆಯ ಯುಗದಲ್ಲಿ
ಬ್ರಹ್ಮ, ವಿಷ್ಣು, ರುದ್ರರ ನಿರ್ಮಿಸಿದಾತ ನಮ್ಮ ಬಸವಣ್ಣ.
ಎರಡನೆಯ ಯುಗದಲ್ಲಿ
ಸಂಗಯ್ಯನ ನಿರ್ಮಿಸಿದಾತ ನಮ್ಮ ಬಸವಣ್ಣ.
ಒಂದನೆಯ ಯುಗದಲ್ಲಿ
ಪ್ರಭುವೆಂಬ ಜಂಗಮವ ನಿರ್ಮಿಸಿದಾತ ನಮ್ಮ ಬಸವಣ್ಣ.
ಇಂತೀ ಇಪ್ಪತ್ತೊಂದು ಯುಗಂಗಳಲ್ಲಿ
ಬಸವಣ್ಣನು ತಮ್ಮ ಕರಕಮಲವೆಂಬ ಗರ್ಭದಲ್ಲಿ ಜನಿಸಿದನೆಂದು
ಕಕ್ಕಯ್ಯಗಳು ತಮ್ಮ ಮೋಹದ ಮಗನೆಂದು,
ಒಕ್ಕುದನಿಕ್ಕಿ ಸಲಹಿದರು ಕಾಣಾ ಕೂಡಲಚೆನ್ನಸಂಗಮದೇವಾ. ॥೩೧೬॥

೩೧೭

ಆದಿ ಅನಾದಿಯೆಂಬವು ನಾದಕ್ಕೆ ಬಾರದ ಮುನ್ನ
ಶೂನ್ಯ ನಿಶ್ಶೂನ್ಯ ಸುರಾಳವೆಂಬವು ಸುಳುಹುದೋರದ ಮುನ್ನ,
ಬೆಳಗು ಕತ್ತಲೆಯಿಲ್ಲದ ಮುನ್ನ,
ಅಳಿವು ಉಳಿವು ಸುಳುವು ಸೂತ್ರಜಂತ್ರ ಜಡ ಅಜಡವಿಲ್ಲದ ಮುನ್ನ,
ಕಡೆ ನಡು ಮೊದಲಿಲ್ಲ ಅಡಿಯಲಾದರ ಹಿಡಿವರೆ ಆರುಹಿಲ್ಲದ ಮುನ್ನ,
ಒಡೆಯನಿಲ್ಲ ಬಂಟನಿಲ್ಲ ನಡೆಯಿಲ್ಲ ನುಡಿಯಿಲ್ಲ ಒಡಲಿಲ್ಲದ ಮುನ್ನ,
ಪೃಥ್ವಿ ಅಪ್ಪು ತೇಜ ವಾಯು ಆಕಾಶ ಚಂದ್ರ ಸೂರ್ಯರು
ತಲೆದೋರದ ಮುನ್ನ,
ದೇವನಿಲ್ಲ ಭಕ್ತನಿಲ್ಲದ ಮುನ್ನ, ನೀನು ನಾನು ಇಲ್ಲದ ಮುನ್ನ,

ಆಕಾರ ನಿರಾಕಾರವೇನು ಇಲ್ಲದ ಮುನ್ನ,
ತಾನು ತಾನೆಂಬ ತಲ್ಲಣವಿಲ್ಲದಂದು,
ಆ ಬಟ್ಟಬಯಲ ಬ್ರಹ್ಮವೆ ಘಟ್ಟಿಯಾದ ಘನವೆಂತೆಂದಡೆ—
ನಿಮ್ಮನುವ ನೀವರಿದಾ ಘನಮಹಿಮರು ತಿಳಿದು ನೋಡಿರಣ್ಣ.
ಆ ಬಟ್ಟಬಯಲೆಂದಡಾರು ? ಬಸವ;
ಆ ಬಸವನೆಂದಡಾರು ? ಬಟ್ಟಬಯಲು
ಆ ಬ್ರಹ್ಮನೆಂದಡಾರು ? ಬಸವ; ಬಸವನೆಂದಡಾರು ? ಬ್ರಹ್ಮ.
ಅಂತಪ್ಪ ಬಸವನ ಆ ಮೂಲವ ಬಲ್ಲವರು ನೀವು ಕೇಳಿರಣ್ಣ.
ಬಸವ ಎಂಬ ಮೂರಕ್ಷರವೆ ಮೂಲ ಪ್ರಣವ.
ಅದೆಂತೆಂದಡೆ, ಬ ಎಂಬುದೆ ಚಿನ್ನಾದ ಆಕಾರವಾಯಿತ್ತು.
ಸ ಯೆಂಬುದೆ ಚಿದ್ಬಿಂದುವಾಯಿತ್ತು.
ವ ಯೆಂಬುದೆ ಚಿತ್ಕಳೆಯಾಯಿತ್ತು.
ಮತ್ತಂ, ಬಯೆಂಬುದೆ ಆಕಾರವಾಯಿತ್ತು,
ಸ ಎಂಬುದೆ ಉಕಾರವಾಯಿತ್ತು.
ವ ಯೆಂಬುದೆ ಮಕಾರವಾಯಿತ್ತು.
ಮತ್ತೆ,ಬಯೆಂಬುದೆ ನಾದವಾಯಿತ್ತು, ಸಯೆಂಬುದೆ ಬಿಂದುವಾಯಿತ್ತು
ವಾಯೆಂಬುದೆ ಕಳೆಯಾಯಿತ್ತು.
ಮತ್ತೆ ಬ ಎಂಬುದೆ ಗುರುವಾಯಿತ್ತು, ಸಯೆಂಬುದೆ ಲಿಂಗವಾಯಿತ್ತು.
ವಾ ಎಂಬುದೆ ಜಂಗಮವಾಯಿತ್ತು.
ಬ ಎಂಬ ನಾದವೆತ್ತಲು, ಸ ಯೆಂಬ ಬಿಂದು ಕೂಡಲು,
ವಯೆಂಬ ಕಳೆ ಬೆರೆಯಲು ಗೋಳಾಕಾರವಾಗಿ ಆದಿ ಪ್ರಣವುವೆನಿಸಿತ್ತು.
ಆದಿಪ್ರಣವು ಅನಾದಿಪ್ರಣವು ಅಂತ್ಯಪ್ರಣವುವೆಂಬವು
ನಮ್ಮ ಬಸವಣ್ಣನ ಸ್ಥೂಲ ಸೂಕ್ಷ್ಮ.
ಇಂತಪ್ಪ ಬಸವಣ್ಣ ಬಯಲ ಬ್ರಹ್ಮವನೆ ಮೆಯಿದು,
ಮೆಲುಕಿರಿದು ಗೋಮಯವಿಕ್ಕಲು ಪೃಥ್ವಿಯಾಯಿತು.
ಇಂತಪ್ಪ ಬಸವಣ್ಣ ಜಲವ ಬಿಡಲು ಅಪ್ಪು ಮಯವಾಯಿತ್ತು.
ಇಂತಪ್ಪ ಬಸವಣ್ಣನ ತೇಜವೆ ಅಗ್ನಿಯಾಯಿತ್ತು.
ಇಂತಪ್ಪ ಬಸವಣ್ಣನ ಉಚ್ಛ್ವಾಸ ನಿಶ್ವಾಸವೆ ವಾಯುವಾಯಿತ್ತು.
ಇಂತಪ್ಪ ಬಸವಣ್ಣನ ಶಬ್ದವೆ ಆಕಾಶವಾಯಿತ್ತು.
ಇಂತಪ್ಪ ಬಸವಣ್ಣನ ಕಂಗಳ ಬೆಳಗೆ ಚಂದ್ರ ಸೂರ್ಯರಾದರು.
ಇಂತಪ್ಪ ಬಸವಣ್ಣನ ಬುದ್ಧಿಯೆ ಆತ್ಮವೆನಿಸಿ

ಇಷ್ಟ ಲಿಂಗಕ್ಕೆ ಕೊಟ್ಟು,
ಆ ರುಚಿಪ್ರಸಾದವ ಜ್ಞಾನಶಕ್ತಿ ಆದಿಶಕ್ತಿ ಕೈಯಲ್ಲಿಪ್ಪ
ಪ್ರಾಣಲಿಂಗಕ್ಕೆ ಇಚ್ಛಾಶಕ್ತಿಯ ಮುಖದಲ್ಲಿ ಕೊಡಲು,
ಆ ರುಚಿಪ್ರಸಾದವ ಪ್ರಾಣಲಿಂಗವಾರೋಗಿಸಿ
ಪರಮಪರಿಣಾಮವನ್ನೈದಲು,
ಆ ಪರಿಣಾಮಪ್ರಸಾದವ ಜ್ಞಾನಶಕ್ತಿಯ ನಂದೀಶ್ವರಂಗೆ ಕೊಡಲು,
ಆ ಪರಮತೃಪ್ತಿಯ ಶೇಷ ನಂದಿಶ್ವರ ಆರೋಗಿಸಿ ಪರವಶವನ್ನೈದಲು,
ಆ ಪರವಶದ ಶೇಷವ ಜ್ಞಾನಶಕ್ತಿ ಆರೋಗಿಸಿ
ಅಡಿಮುಡಿಗೆ ತಾನೆ ಆಗಿಯಾಗಲು,
ಅದೀಗ ಅಡಿಮುಡಿಯ ಶೇಷಹೊತ್ತಿಪ್ಪನೆಂದು
ವೇದಾಗಮಶಾಸ್ತ್ರ ಪುರಾಣ ಪುರುಷರು ನುಡಿಯುತಿಪ್ಪರು,
ಇಂತಪ್ಪ ಬಸವನ ಆದಿ ಮೂಲವ ಬಲ್ಲ ಶರಣನಾ
ಯತ್ತು ತೊತ್ತು ಮುಕ್ಕುಳಿಸಿ ಉಗುಳುವ ಪಡುಗ
ಮೆಟ್ಟುವ ಚರ್ಮ ಹಾವುಗೆಯಾಗಿ ಬದುಕಿದೆನು ಕಾಣಾ
ಬಸವಪ್ರಿಯ ಕೂಡಲಸಂಗಮದೇವಾ
ನಿಮ್ಮ ಧರ್ಮ ನಿಮ್ಮ ಧರ್ಮ. ||೩೪||

೩೧೯

ಶ್ರೀಗುರುಸ್ವಾಮಿ ಕರುಣಿಸಿಕೊಟ್ಟ ಪ್ರಾಣಲಿಂಗವು
ಪಂಚಬ್ರಹ್ಮಮುಖವುಳ್ಳ ವಸ್ತುವೆಂದರಿವುದು.
ಆ ಪಂಚಬ್ರಹ್ಮಮುಖಸಂಜ್ಞೆಯ ಭೇದವೆಂತೆಂದಡೆ,
ಆವುದಾನೊಂದು ಶಿವಸಂಬಂಧವಾದ ಪರಮತೇಜೋಲಿಂಗವು
ತನ್ನ ಭೋಗಾದಿ ಕಾರಣ, ಮೂರ್ತಿಗಳಿಂದುದಯವಾದ
ಬ್ರಹ್ಮಾದಿತೃಣಾಂತವಾದ ದೇಹಿಗಳಿಂದಲೂ
ವ್ಯೋಮಾದಿಭೂತಂಗಳಿಂದಲೂ
ಇತ್ಯಾದಿ ಸಮಸ್ತತತ್ವಂಗಳಿಂದಲೂ
ಮೇಲಣ ತತ್ವವಪ್ಪುದೇ ಕಾರಣವಾಗಿ,
ಪರವೆಂಬ ಸಂಜ್ಞೆಯದುಳ್ಳದಾಗಿಪುದು.
ಅನಂತಕೋಟಿಬ್ರಹ್ಮಾಂಡಂಗಳ ತನ್ನೊಳಡಗಿಸಿಕೊಂಡು
ಸಮಸ್ತಜಗಜ್ಜನನಕ್ಕೆ ತಾನೇ ಕಾರಣವಾಗಿ

ಅವ್ಯಕ್ತಲಕ್ಷಿತವಾದ ನಿಮಿತ್ತಂ ಗೂಢವೆಂಬ
ಸಂಜ್ಞೆಯುಳ್ಳುದಾಗಿಹುದು.
ತಾನು ಶೂನ್ಯಶಿವತತ್ವ ಭೇದವಾಗಿ ಆಯಸ್ಕಾಂತ ಸನ್ನಿಧಿಯಿಂದ
ಲೋಹವೇ ಹೇಗೆ [ಆಯಸ್ಕಾಂತವೆಂದು] ಭ್ರಮಿಸುವುದೋ ಹಾಗೆ
ಬ್ರಹ್ಮಾದಿಗಳ ಹೃತ್ಕಮಲಮಧ್ಯದಲ್ಲಿದ್ದು
ತನ್ನ ಚಿಚ್ಛಕ್ತಿಯ ಸನ್ನಿಧಿಮಾತ್ರದಿಂದ ಅಹಮಾದಿಗಳಿಂ
ವ್ಯೋಮಾದಿಭೂತಗಳಂದ ಸೃಷ್ಟಿಸುವದಕ್ಕೆ ತಾನೇ ಕಾರಣವಪ್ಪುದರಿಂದ
ಶರೀರಸ್ಥವೆಂಬ ಸಂಜ್ಞೆಯದುಳ್ಳದಾಗಿಹುದು.
ತನ್ನ ಸೃಷ್ಟಿಶಕ್ತಿಯಿಂದುದಯವಾದ ಸಮಸ್ತಸಂಸಾರಾದಿ ಪ್ರಪಂಚವು
ತನ್ನಿಂದಲೇ ಕಾರಣವಪ್ಪುದರಿಂ
ಅನಾದಿವತ್ತೆಂಬ ಸಂಜ್ಞೆಯದುಳ್ಳುದಾಗಿಹುದು.
ತನ್ನ ಮಾಯಾಶಕ್ತಿಯಿಂದುದಯವಾದ
ಸ್ತ್ರೀಲಿಂಗ ಪುಲ್ಲಿಂಗ ನಪುಂಸಕಲಿಂಗವೆಂಬ
ತ್ರಿಲಕ್ಷಿತವಾದ ಸಮಸ್ತ ಪ್ರಪಂಚವು ವರ್ತಿಸುವುದಕ್ಕೆ
ತಾನೇ ಕ್ಷೇತ್ರವಾದ ಕಾರಣ,
ಲಿಂಗಕ್ಷೇತ್ರವೆಂಬ ಸಂಜ್ಞೆಯುಳ್ಳುದುದಾಗಿಹುದು.
ಈ ಪ್ರಕಾರದಿಂ ಪರಬ್ರಹ್ಮಲಿಂಗವು ಪಂಚಮುಖಸಂಜ್ಞೆಯು
ಉಳ್ಳುದಾಗಿಹುದೆಂದರಿವುದು.
ಅದೆಂತೆಂದಡೆ ಆದಕ್ಕೆ ವಾತುಳಾಗಮದಲ್ಲಿ,
'ಅಖಿಳಾರ್ಣವಲಯಾನಾಂ ಲಿಂಗತತ್ತ್ವಂ ಪರಂ ತತಃ
ಪರಂ ಗೂಢ ಶರೀರಸ್ಥಂ ಲಿಂಗಕ್ಷೇತ್ರಮನಾದಿವತ್
ಯದಾದ್ಯಮೈಶ್ವರಂ ತೇಜಸ್ತ್ರಲಿಂಗಂ ಪಂಚಸಂಜ್ಞಕಂ'
ಎಂದೆನಿಸುವುದು ಲಿಂಗವು.
ಮತ್ತಂ ವಾಶಿಷ್ಠದಲ್ಲಿ,
'ಪಿಂಡಬ್ರಹ್ಮಾಂಡಯೋರೈಕ್ಯಂ ಲಿಂಗ ಸೂತ್ರಾತ್ಮನೋರಪಿ
ಸಬಾಹ್ಯಾಂತರಯೋರೈಕ್ಯಂ ಕ್ಷೇತ್ರಜ್ಞಪರಮಾತ್ಮನೋಃ'
ಎಂದೆನಿಸುವುದು ಲಿಂಗವು.
ಮತ್ತಂ, ಬ್ರಹ್ಮಾಂಡಪುರಾಣದಲ್ಲಿ-
'ಅಧಿಷ್ಠಾನಂ ಸಮಸ್ತಸ್ಯ ಸ್ಥಾವರಸ್ಯ ಚರಸ್ಯ ಚ
ಜಗತೋಃ ಯದ್ಭವೇತ್ ತತ್ವಂ ತದ್ದಿವ್ಯಂ ಸ್ಥಲಮುಚ್ಯತೇ'
ಎಂದೆನಿಸುವ ಲಿಂಗವು.

ಮತ್ತಂ ಶಿವರಹಸ್ಯದಲ್ಲಿ,
ಮಹಾಲಿಂಗಮಿದಂ ದೇವಿ ಮನೋತೀತಮಗೋಚರಂ
ನಿರ್ನಾಮಂ ನಿರ್ಗುಣಂ ನಿತ್ಯಂ ನಿರಂಜನಮನಾಮಯಂ'
ಎಂದೆನಿಸುವ ಲಿಂಗವು,
ಮತ್ತಂ ಉತ್ತರವಾತುಳದಲ್ಲಿ,
'ಆದ್ಯಂತಶೂನ್ಯಮಮಲಂ ಪರಿಪೂರ್ಣಮೇಕಂ
ಸೂಕ್ಷ್ಮಂ ಪರಾತ್ಪರಮನಾಮಯಮಪ್ರಮೇಯಂ
ಭಾವೈಕಗಮ್ಯಮಜಡಂ ಶಿವತತ್ವಮಾಹುಃ
ಚಿಚ್ಛಕ್ತಿಸಂಸ್ಫುರಣ ರೂಢಮಹಾತ್ಮಲಿಂಗಂ'
ಎಂದೆನಿಸುವ ಲಿಂಗವು.
ಮತ್ತಂ ಅಥರ್ವಣವೇದದಲ್ಲಿ,
ಶಿವಂ ಪರಾತ್ಪರಂ ಸೂಕ್ಷ್ಮಂ ನಿತ್ಯಂ ಸರ್ವಗತಾವ್ಯಯಂ
ಅನಿಂದಿತಮನೌಪಮ್ಯಮಪ್ರಮಾಣಮನಾಮಯಮ್
ಶುದ್ಧತ್ವಾಚ್ಛಿವಮುದ್ದಿಷ್ಟಂ ಪರಾದೂರ್ಧ್ವಂ ಪರಾತ್ಪರಂ,
ಎಂದೆನಿಸುವ ಲಿಂಗವು.
ಮತ್ತಂ ಸಾಮವೇದದಲ್ಲಿ,
ಅನಂತಮವ್ಯಕ್ತಮಚಿಂತ್ಯಮೇಕಂ
ಹರಂತಮಾಶಾಂಬರಮಪ್ರಮೇಯಂ
ಲೋಕೈಕನಾಥಂ ಭುಜಗೇಂದ್ರಂ ಹಾರಂ
ಅಜಂ ಪುರಾಣಂ ಪ್ರಣಮಾಮಿ ನಿತ್ಯಂ.
ಅಣೋರಣೀಯಾನ್ ಮಹತೋ ಮಹೀಯಾನ್'
ಎಂದೆನಿಸುವ ಲಿಂಗವು.
ಮತ್ತಂ ಶಿವಧರ್ಮ ಪುರಾಣದಲ್ಲಿ,
'ಆಕಾಶಂ ಲಿಂಗಮಿತ್ಯಾಹುಃ ಪೃಥ್ವೀತಸ್ಯಾದಿ ಪೀಠಿಕಾ
ಆಲಯಸ್ಸರ್ವ ಭೂತಾನಾಂ ಲಯನಾಲ್ಲಿಂಗಮುಚ್ಯತೇ'
ಎಂದೆನಿಸುವ ಲಿಂಗವು.
ಮತ್ತಂ ಗರುಡಪುರಾಣದಲ್ಲಿ,
'ಲಿಂಗಮಧ್ಯೇ ಜಗತ್ ಸರ್ವಂ ತ್ರೈಲೋಕ್ಯಂ ಸಚರಾಚರಂ
ಲಿಂಗಬಾಹ್ಯಾತ್ ಪರಂ ನಾಸ್ತಿ ತಸ್ಮೈ ಶ್ರೀಗುರುವೇ ನಮಃ'
ಎಂದೆನಿಸುವ ಲಿಂಗವು.
ಮತ್ತಂ ಯಜುರ್ವೇದದಲ್ಲಿ,

'ವಿಶ್ವತಶ್ಚಕ್ಷುರುತ ವಿಶ್ವತೋಮುಖೋ–
ವಿಶ್ವತೋಬಾಹುರುತ ವಿಶ್ವತಸ್ಪಾತ್
ಸಂ ಬಾಹುಭ್ಯಾಂ ಧಮತಿ ಸ ಪತತ್ರೈರ್ದ್ಯಾವಾಭೂಮಿ–
ಜನಯನ್ ದೇವ ಏಕಃ'
ಎಂದೆನಿಸುವ ಲಿಂಗವು,
ಮತ್ತಂ ಗಾಯತ್ರಿಯಲ್ಲಿ,
ಓಂ ಭೂಃ ಓಂ ಭುವಃ ಓಂ ಸುವಃ ಓಂ ಮಹಃ ಓಂ ಜನಃ
ಓಂ ತಪಃ ಓಂ ಸತ್ಯಂ ಓಂ ತತ್ಸವಿತುರ್ವರೇಣ್ಯಂ
ಭರ್ಗೋ ದೇವಸ್ಯ ಧೀಮಹಿ ದಿಯೋ ಯೋ ನಃ ಪ್ರಚೋದಯಾತ್.'
ಎಂದೆನಿಸುವಲಿಂಗವು.
ಮತ್ತಂ ಸ್ಕಂದಪುರಾಣದಲ್ಲಿ,
'ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ
ತದೇವ ಲಿಂಗಮಿತ್ಯುಕ್ತಂ ಲಿಂಗತತ್ತ್ವ ಪರಾಯಣೈಃ'
ಎಂದೆನಿಸುವ ಲಿಂಗವು,
ಮತ್ತಂ ಜ್ಞಾನವೈಭವಖಂಡದಲ್ಲಿ,
'ಲಕಾರಂ ಲಯಸಂಪ್ರೋಕ್ತಂ ಗಕಾರಂ ಸೃಷ್ಟಿರುಚ್ಯತೇ
ಲಯನಾದ್ಗಮಚ್ಚೈವ ಲಿಂಗಶಬ್ದ ಮಿಹೋಚ್ಯತೇ'
ಎಂದೆನಿಸುವ ಲಿಂಗವು.
ಮತ್ತಂ ಮಹಿಮ್ನದಲ್ಲಿ,
'ಚಕಿತಮಭಿಧತ್ತೇ ಶ್ರುತಿರಪಿ' ಎಂದೆನಿಸುವ ಲಿಂಗವು.
ಮತ್ತಂ ಶಿವಧರ್ಮೋತ್ತರದಲ್ಲಿ,
'ನ ಜಾನಂತಿ ಪರಂ ಭಾವಂ ಯಸ್ಯ ಬ್ರಹ್ಮಸುರಾದಯಃ'
ಎಂದೆನಿಸುವ ಲಿಂಗವು.
ಮತ್ತಂ ಪುರುಷಸೂಕ್ತದಲ್ಲಿ,
'ಅತ್ಯತಿಷ್ಠದ್ದಶಾಂಗುಲಂ' ಎಂದೆನಿಸುವ ಲಿಂಗವು.
ಮತ್ತಂ ಉಪನಿಷತ್ತಿನಲ್ಲಿ,
'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'
ಎಂದೆನಿಸುವ ಲಿಂಗವು,
ಮತ್ತಂ ಕೂರ್ಮಪುರಾಣದಲ್ಲಿ,
'ವಾಚಾತೀತಂ ಮನೋತೀತಂ ಭಾವಾತೀತಂ ನಿರಂಜನಂ
ಅವರ್ಣಮಕ್ಷರಂ ಬ್ರಹ್ಮ ನಿತ್ಯಂ ಧ್ಯಾಯಂತಿ ಯೋಗಿನಃ'

ಎಂದೆನಿಸುವ ಲಿಂಗವು.
ಮತ್ತಂ ಋಗ್ವೇದದಲ್ಲಿ,
'ಅಯಂ ಮೇ ಹಸ್ತೋ ಭಗವಾನ್ ಅಯಂ ಮೇ ಭಗವತ್ತರಃ
ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ
ಅಯಂ ಮಾತಾ ಅಯಂ ಪಿತಾ ಅಯಂ ಜೀವಾತುರಾಗಮತ್'
ಎಂದೆನಿಸುವ ಲಿಂಗವು.
ಮತ್ತಂ ಉತ್ತರವಾತುಳದಲ್ಲಿ,
'ಸ ಬಾಹ್ಯಾಭ್ಯಂತರಂ ಸಾಕ್ಷಾಲ್ಲಿಂಗಜ್ಯೋತಿಃ ಪರಂ ಸ್ವಕಂ
ತಿಲೇ ತೈಲಮಿವಾಭಾತಿ ಅರಣ್ಯಾಮಿವ ಪಾವಕಃ
ಕ್ಷೀರೇ ಸರ್ಪಿರಿವ ಸ್ರೋತಸ್ಯಂಬುವತ್ ಸ್ಥಿತಮಾತ್ಮನಿ
ಏಕೋಽಯಂ ಪುರುಷೋ ವಿಶ್ವತೈಜಸಪ್ರಾಜ್ಞರೂಪತಃ
ಸದಾ ಸ್ವಾಂಗೇಷು ಸಂಯುಕ್ತಮುಪಾಸ್ತೇ ಲಿಂಗಮದ್ವಯಂ'
ಎಂದೆನಿಸುವ ಲಿಂಗವು.
ಮತ್ತಂ ಲೈಂಗ್ಯದಲ್ಲಿ,
'ಅನಯೋದೃಷ್ಟಿ ಸಂಯೋಗಾಜ್ಜಾಯತೇ ಜ್ಞಪ್ತಿರೂಪಿಣೀ
ವೇಧಾದೀಕ್ಷಾ ತು ಸೈವಸ್ಯಾನ್ಮಂತ್ರರೂಪೇಣ ತಾಂ ಶ್ರುಣು'
ಎಂದೆನಿಸುವ ಲಿಂಗವು.
ಮತ್ತಂ ಕಾಳಿಕಾಖಂಡದಲ್ಲಿ,
'ಅಂಗಂ ಚ ಲಿಂಗಂ ಚ ಮುಖಂ ಚ ಹಸ್ತಂ ಶಕ್ತಿಶ್ಚ
ಭಕ್ತಿಶ್ಚ ತಥಾರ್ಪಣಂ ಚ ಆನಂದಮೇವ
ಸ್ವಯಮರ್ಪಣಂ ಚ ಪ್ರಸಾದರೂಪೇಣ ಭವೇತ್ರಿ ತತ್ವಂ'
ಎಂದೆನಿಸುವ ಲಿಂಗವು.
ಮತ್ತಂ ಶಂಕರ ಸಂಹಿತಿಯಲ್ಲಿ,
'ತದೇವ ಹಸ್ತಾಂಬುಜ ಪೀಠಮಧ್ಯೇ ನಿಧಾಯ
ಲಿಂಗಂ ಪರಮಾತ್ಮ ಚಿಹ್ನಂ.
ಸಮರ್ಚಯೇದೇಕಧಿಯೋಪಚಾರೈರ್ನರಶ್ಚ
ಬಾಹ್ಯಾಂತರಭೇಧಭಿನ್ನಂ'
ಎಂದೆನಿಸುವ ಲಿಂಗವು.
ಮತ್ತಂ ವೀರಾಗಮದಲ್ಲಿ,
ಭಾವಪ್ರಾಣಶರೀರೇಷು ಲಿಂಗಂ ಸಂಸಾರಮೋಚಕಂ.
ಧಾರಯೇದವಧಾನೇನ ಭಕ್ತಿ ನಿಷ್ಠಸ್ಸುಬುದ್ಧಿಮಾನ್.'

ಎಂದೆನಿಸುವ ಲಿಂಗವು.
ಮತ್ತಂ ಶಿವರಹಸ್ಯದಲ್ಲಿ,
ಕರ್ಣದ್ವಾರೇ ಯಥಾವಾಕ್ಯಂ ಗುರುಣಾ ಲಿಂಗಮೀರ್ಯತೇ
ಇಷ್ಟಂ ಪ್ರಾಣಸ್ತಥಾ ಭಾವಸ್ತ್ರಿಧಾಚೈಕ್ಯಂ ವರಾನನೇ'
ಎಂದೆನಿಸುವ ಲಿಂಗವು.
ಮತ್ತಂ ಶಿವರಹಸ್ಯದಲ್ಲಿ.
'ಏಕಮೂರ್ತಿಸ್ತ್ರಯೋ ಭಾಗಾಃ ಗುರುರ್ಲಿಂಗ ತು ಜಂಗಮಃ
ಜಂಗಮಶ್ಚ ಗುರುರ್ಲಿಂಗಂ ತ್ರಿವಿಧಂ ಲಿಂಗಮುಚ್ಚತೇ'
ಎಂದೆನಿಸುವ ಲಿಂಗವು.
ಗುರು ಲಿಂಗ ಜಂಗಮ ರೂಪಾಗಿ ಎನ್ನ ಕರಸ್ಥಲಕ್ಕೆ ಬಿಜಯಂಗೈದು
ಕರತಲಾಮಲಕವಾಗಿ ತೋಱುತ್ತೈದಾನೆ.
ಆಹಾ! ಎನ್ನ ಪುಣ್ಯವೇ! ಆಹಾ! ಎನ್ನ ಭಾಗ್ಯವೆ!
ಆಹಾ! ಎನ್ನ ಸತ್ಯವೇ! ಆಹಾ! ಎನ್ನ ನಿತ್ಯವೇ!
ಶಿವಶಿವ, ಮಹಾದೇವ ಮಹಾದೇವ ಮಹಾದೇವ
ನೀನೇ ಬಲ್ಲೆ, ನೀನೇ ಬಲ್ಲೆ,
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ. ॥೩೯॥

೩೨೦

ಶಿವಲಿಂಗದ ಮಹಾತ್ಮೆಯನು ಶಿವಲಿಂಗದ ಮರ್ಮವನು
ಶಿವಲಿಂಗದ ನಿಶ್ಚಯವನು ಆದಾರಯ್ಯ ಬಲ್ಲರು ?
ಆದಾರಯ್ಯ ಅರಿವರು, ಶ್ರೀಗುರು ತೋರಿ ಕೊಡದನ್ನಕ್ಕರ ?
'ಸರ್ವೈಶ್ವರ್ಯ ಸಂಹನವಂ ಮಧ್ಯಧ್ರುವಾಂ ತತ್ವಾಧಿಕಂ'
ಎಂದುದಾಗಿ,
'ಅಣೋರಣೀಯಾನ್ ಮಹತೋ ಮಹೀಯಾನ್'
ಎಂದುದಾಗಿ,
'ಯತೋ ವಾಚೋ ನಿವರ್ತಂತೇ [ಅಪ್ರಾಪ್ಯ ಮನಸಾ ಸಹ]'
ಎಂದುದಾಗಿ,
'ಅತ್ಯತಿಷ್ಠ ದ್ದಶಾಂಗುಲಂ' ಎಂದುದಾಗಿ,
ಈ ಪ್ರಕಾರದಿಂದ ವೇದಾಗಮಂಗಳು ಸಾರುತ್ತಿರಲು
ಲಿಂಗವನು ಹರಿಬ್ರಹ್ಮಾದಿ ದೇವದಾನವರು ಅರಿಯಬಾರದಾಗಿ,
'ಚಕಿತಮಭಿದತ್ತೆ ಶ್ರುತಿರಪಿ' ಎಂದುದಾಗಿ

ವೇದಪುರುಷರಿಗೂ ಅರಿಯಬಾರದು.
ಇಂತಪ್ಪ ಅರಿಯಬಾರದ ವಸ್ತುವ ರೂಹಿಸಲೆಂತೂಬಾರದು
ರೂಹಿಸಬಾರದ ವಸ್ತು ಪೂಜಿಸಲೆಂತು ಬಹುದು ?
ಪೂಜೆಗಿಲ್ಲವಾಗಿ ಭಕ್ತಿಗಿಲ್ಲವಾಗಿ ಪ್ರಸಾದಕಿಲ್ಲವಾಗಿ ಮುಕ್ತಿಗಿಲ್ಲ.
ಮುಕ್ತಿಗಿಲ್ಲದೆ ದೇವದಾನವ ಮಾನವರೆಲ್ಲರು ಕೆಡುವರು.
ಕೆಡದಂತೆ ಮಾಡಿ ರಕ್ಷಿಸಿದನು ಸದ್ಗುರು ಮಹಾಗುರು ಶ್ರೀಗುರು
'ನಗುರೋರಧಿಕಂ' ಎಂದುದಾಗಿ.
ಮಹಾಗುರು ಶಾಂತಮೂರ್ತಿ ಕೃಪಾಮೂರ್ತಿ
ಲಿಂಗಪ್ರತಿಷ್ಠೆಯ ಮಾಡಿದನು.
ಅದೆಂತೆನಲು ಕೇಳಿರೆ,
'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ
ನಾದಬಿಂದು ಕಳಾತೀತಂ ಗುರೂಣಾ ಲಿಂಗಮುದ್ಭವಂ.'
ಎಂದುದಾಗಿ,
'ಸದ್ಗುರೋರ್ಭಾಲಿಂಗಂ ಚ ಸರ್ವ ಬ್ರಹ್ಮಾಂಡವಾಸಿನಾಂ
ಸರ್ವಲೋಕಸ್ಯ ವಾಸಸ್ಯವಾತ್ ಮುಕ್ತಿಕ್ಷೇತ್ರಂ ಸುವಾಸಿನಾಂ
ಸದ್ಗುರುರ್ದೀಯತೇ ಲಿಂಗ ಸದ್ಗುರುರ್ದೀಯತೇ ಕ್ರಿಯಾ
ಸದ್ಗುರುರ್ದೀಯತೇ ಮಂತ್ರಂ ಸದ್ಗುರುಃ ಸರ್ವಕಾರಣಂ'
ಎಂದುದಾಗಿ, ಸರ್ವರಿಗೆಯೂ ಲಿಂಗಪ್ರತಿಷ್ಠೆಯಂ ಮಾಡಿಕೊಟ್ಟನು.
ಅರೂಪೋ ಭಾವನಂ ನಾಸ್ತಿ ಯದ್ದೃಶ್ಯಂ ತದ್ವಿನಶ್ಯತಿ
ದೃಶ್ಯಾದೃಶ್ಯ ಸ್ವರೂಪತ್ವಂ ತದಾಸೇವ ಸದಾಭ್ಯಸೇತ್'
ಎಂದುದಾಗಿ,
ನಿಃಷ್ಕಲ ನಿರೂಪ ನಿರವಾಯ ಧ್ಯಾನಪೂಜೆಗನುವಲ್ಲ.
ಸಕಲತತ್ವ ಸಾಮಾನ್ಯವೆಂದು,
ಸಕಲ ನಿಃಷ್ಕಲವನೊಂದಾಗಿ ಮಾಡಿದನು.
ಲಿಂಗಂ ತಾಪತ್ರಯ ಹರಂ ಲಿಂಗಂ ದಾರಿದ್ರ್ಯ ನಾಶನಂ
ಲಿಂಗಂ ಪಾಪವಿನಾಶಂ ಚ ಲಿಂಗಂ ಸರ್ವಾರ್ಥಂ ಸಾಧನಂ
ಎಂದುದಾಗಿ, ಲಿಂಗವು ಪರಂಜ್ಯೋತಿರ್ಲಿಂಗವು,
ಲಿಂಗವು ಪರಬ್ರಹ್ಮವೆಂದು ಲಿಂಗವನೆ ಪೂಜಿಸಿ
ಭಕ್ತಿಯಪ್ರಸಾದ ಮುಕ್ತಿಯ ಪಡೆಯಲೆಂದು
ಮಹಾಘನಗುರು ಲಿಂಗಪ್ರತಿಷ್ಠೆಯಂ ಮಾಡಿ
ತೋರಿಕೊಟ್ಟನು, ಅದೆಂತೆಂದಡೆ—

'ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಈಶ್ವರಶ್ಚ ಸದಾಶಿವಃ
ಸರ್ವೇ ಲಿಂಗಾರ್ಚನಂ ಕೃತ್ವಾ ಜಾತಾಸ್ತೇ ಲಿಂಗಪೂಜಕಾಃ
ಗೌರಿಪತಿರುಮಾನಾಥೋ ಅಂಬಿಕಾ ಪಾರ್ವತೀ ಪತಿಃ
ಗಂಗಾಪತಿರ್ಮಹಾದೇವೋ ಸತತಂ ಲಿಂಗಪೂಜಕಾಃ'
ಎಂದುದಾಗಿ,
ಈ ಪುರುಷರಪ್ಪ ದೇವಗಣ ರುದ್ರಗಣ ಪ್ರಮಥಗಣಂಗಳು
ವಿಷ್ಣ್ವಾದಿ ದೇವದ ನವ ಮಾನವಾದಿಗಳು ಸಹ
ಶ್ರೀ ಮಹಾಲಿಂಗವನೆ ಧ್ಯಾನಿಸಿ ಪೂಜಿಸಿ
ಪರಮಸುಖಪರಿಣಾಮವ ಪಡೆಯಲೆಂದು ಮಾಡಿದನು
ಕೇವಲ ಸದ್ಭಕ್ತ ಜನಂಗಳಿಗೆ ಅದೆಂತೆಂದಡೆ—
'ಇಷ್ಟ ಪ್ರಾಣಸ್ತಥಾ ತ್ರೀಧಾವೇಕಂ ವರಾನನೆ'
ಎಂದುದಾಗಿ.
ಆ ಸದ್ಗುರು ಪರಶಿವನನು ಸತ್ಪ್ರಾಣವನು ಏಕೀಭವಿಸಿ
ಸದ್ಭಾವದಿಂ ಲಿಂಗಪ್ರತಿಷ್ಠೆಯಂ ಮಾಡಿ,
ಲಿಂಗವನು ಕರದಲ್ಲಿ ಬಿಜಯಂಗೈದು
ಅಂತರಂಗ ಬಹಿರಂಗ ಭರಿತನಾಗಿ
ಪೂಜೆಗೊಳಲೆಂದು ಕರುಣಿಸಿದನು.
ಮತ್ತಂ, 'ಏಕಮೂರ್ತಿ ತ್ರಿಭೇದಂ' ಎಂದುದಾಗಿ
ಗುರುಲಿಂಗ ಜಂಗಮಲಿಂಗ ಶಿವಲಿಂಗ ಎಂದು
'ದೇಶಿಕಶ್ಚರಲಿಂಗೇ ಚ ತ್ರಿವಿಧಂ ಲಿಂಗಮುಚ್ಯತೇ'
ಎಂದುದಾಗಿ,

ಲಿಂಗದ ವರ್ಮವನು ಲಿಂಗದ ಸ್ವರೂಪವನು
ಲಿಂಗದ ನಿಶ್ಚಯವನು. ಆದಿಯಲ್ಲಿ ಧ್ಯಾನಪೂಜೆಯ ಮಾಡಿದವರನೂ
ವೇದಶಾಸ್ತ್ರಪುರಾಣಾಗಮಂಗಳೂ ಹೇಳುತ್ತವೆ,
ಶಿವನ ವಾಕ್ಯಂಗಳಿವೆ: ಇದೇ ದಿಟ.
ಮನವೆ ನಂಬು ಕೆಡಬೇಡ ಕೆಡಬೇಡ.
ಮಹಾಸದ್ಭಕ್ತರ ನಂಬುವುದು
ಶಿವಲಿಂಗಾರ್ಚನೆಯು ನಿರಂತರ ಮಾಡುವುದು.
ಇದು ನಿಶ್ಚಯ, ಶಿವನು ಬಲ್ಲನಯ್ಯಾ.
ಕ್ರೀಯಲ್ಲಿ ಲಿಂಗ ಜಂಗಮವನರಿತು ವಿಶ್ವಾಸಮಂ ಮಾಡಿ,

ಕೇವಲ ಸದ್ಭಕ್ತಿಯಿಂ ಕ್ರೀಯಾಕ್ರೀಯುವನರಿತಂ,
ಆ ವರ್ಮವಂ ಕಂಡು ಸದ್ಭಾವದಿಂ
ಲಿಂಗಾರ್ಚನೆಯು ಮಾಡುವದಯ್ಯ
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ. ॥೩೭॥



ಅಷ್ಟತನುಮೂರ್ತಿಯೆ ತನುವೆನಿಸಿ.
ಪಿಂಡಬ್ರಹ್ಮಾಂಡ ಕೋಟ್ಯಾನುಕೋಟಿ ಅಂಡಪಿಂಡಂಗಳಿಗೆ
ಒಡಲಾಗಿ ಅಡಿಮುಡಿಗೆ ತಾನೆ ಆದಿಯಾಗಿ,
ಸರ್ವವೂ ನಮ್ಮ ಬಸವಣ್ಣನ ಒಡಲಲ್ಲಿ
ಹುಟ್ಟುತ್ತ ಬೆಳೆಯುತ್ತ ಅಳಿವುತಿಪ್ಪವು ಕಾಣಿರೆ.
ಇಂತಪ್ಪ ಸಕಲ ಪ್ರಾಣಿಗಳಿಗೆ ನಮ್ಮ ಬಸವಣ್ಣನ
ಗೋಮಯದಲ್ಲಿ ಹುಟ್ಟಿದಾ ಪೃಥ್ವಿಯ ಪದಾರ್ಥ.
ಆದಿ ಜಲದಿಂದ ಹುಟ್ಟಿದ ಉದುಕವೆ ಸಾರ.
ತೇಜದಿಂದ ಹುಟ್ಟಿದ ಅಗ್ನಿಯೆ ಕಳೆ.
ಉಚ್ಛ್ವಾಸ ನಿಶ್ವಾಸದಿಂದ ಹುಟ್ಟಿದ ಚಂದ್ರಸೂರ್ಯರೇ ಅರಿವು ಮರವು.
ಬುದ್ಧಿಯಿಂದ ಹುಟ್ಟಿದ ಆತ್ಮನೆ ಚೈತನ್ಯಾತ್ಮ.
ಇಂತೀ ಸರ್ವ ಪ್ರಾಣಿಗಳಿಗೆ ನಮ್ಮ ಬಸವಣ್ಣನೆ ಆದಿ ಕಾಣಿರೇ.
ಆದಿಯಲ್ಲಿ ಹುಟ್ಟಿ ಮಧ್ಯದಲ್ಲಿ ಬೆಳದು ಅಂತ್ಯದಲ್ಲಿ ಲಯವನೆಯ್ದಿದರೆ
ಮತ್ತೆ ನಿಲ್ಲುವದಕ್ಕೆ ನಮ್ಮ ಬಸವಣ್ಣನೆ ಆದಿ ಕಾಣಿರೇ.
ಇಂತೀ ಒಳ ಹೊರಗೆ ಕೈಕೊಂಬರೆ
ದೇವರು ಬೇರೊಬ್ಬರುಂಟಾದರೆ ಬಲ್ಲರೆ ನೀವು ಹೇಳಿ ತೋರಿರೆ!
ಅಲ್ಲದಿರ್ದರೆ ನಿಮ್ಮ ವೇದಾಗಮಶಾಸ್ತ್ರಪೌರಾಣಗಳ ಕೈಯಲ್ಲಿ ಹೇಳಿಸಿರೆ!
ಇಂತೀ ಅನಾದಿ ಸಂಸಿದ್ಧ ಬಟ್ಟಬಯಲು ಬ್ರಹ್ಮವೆ ಬಸವನೆಂಬುದಂ
ಕಾಣುತಿರ್ದು ಕೇಳುತಿರ್ದು ಹೇಳುತಿರ್ದು,
ಅರಿಯದಿರ್ದು ಮತ್ತೆ ಕೀಳು ದೈವಂಗಳನಾರಾಧಿಸಿ ಅರ್ಚನೆ
ಅರ್ಚನೆ ಪೂಜೆಯ ಹಲವು ಚಂದದಲ್ಲಿ ಮಾಡಿ
ಹಲವು ಜಾತಿ ಹಲವು ದರುಶನವಕೊಂಡು
ಹೊಲಬುದಪ್ಪಿದ ಹುಲುಮನುಜರಿರಾ.
ಇನ್ನಾದರೂ ಅರಿದು ನೆನದು ಬದುಕಿ,
ನಮ್ಮ ಬಸವಪ್ರಿಯಕೂಡಲಸಂಗಮದೇವನ
ಶ್ರೀಪಾದಪದ್ಮವ ಕೂಡಬಲ್ಲರೆ. ॥೩೩॥

೩೧೮

ಆದಿ ಅನಾದಿಯೆಂಬವು ಸಂಗಷ್ಟವಾಗಿದ್ದು ವಿಭೇದವಾಗುವಲ್ಲಿ
ಕುಂಡಲಿಯ ಶಕ್ತಿಯಲ್ಲಿ ಪ್ರಾಣವಾಯು ಪ್ರಣವ ಸ್ವರವನೊಡಗೂಡಿ
ಬ್ರಹ್ಮಸ್ಥಾನದಲ್ಲಿ ಸ್ಥಾಪ್ಯಶಿವನಾಗಿ, ಭ್ರೂಮಧ್ಯ ಕಂಠಸ್ಥಾನದಲ್ಲಿ

ನಿಃಕಲ ಸ್ವರೂಪನಾಗಿ,
ಹೃದಯ ನಾಭಿಯಲ್ಲಿ ಸಕಲನಿಃಕಲನಾಗಿ.
ಸ್ವಾಧಿಷ್ಠಾನ ಆಧಾರದಲ್ಲಿ ಕೇವಲ ಸಕಲನಾಗಿ,
ಆ ಸಕಲಕ್ಕೆ ಎರಡು ಪಾದವನಿತ್ತು, ಒಂದು ಪಾದಕ್ಕೆ ಕ್ರಿಯಾಶಕ್ತಿ
ಒಂದು ಪಾದಕ್ಕೆ ಜ್ಞಾನಶಕ್ತಿಯ ಮಾಡಿ ನಿಲ್ಲಿಸಿ,
ಮೇಲಣ ಸಕಲನಿಃಕಲ ತತ್ತ್ವಕೈದಿ ಅಲ್ಲಿಗೆ ಎರಡು ಹಸ್ತವನಿತ್ತು,
ಒಂದು ಹಸ್ತಕ್ಕೆ ಆದಿಶಕ್ತಿ,
ಒಂದು ಹಸ್ತಕ್ಕೆ ಇಚ್ಛಾಶಕ್ತಿಯನಾದಿ ಮಾಡಿ ನಿಲಿಸಿ,
ಮೇಲಣ ನಿಃಕಲತತ್ತ್ವವನೈದಿ ಅಲ್ಲಿಗೆ ನಾಲ್ಕು ಪಾದವನಿತ್ತು,
ಅವು ಆವಾವುಯೆಂದಡೆ ಜಿಹ್ವೆ ಘ್ರಾಣ ನೇತ್ರ ಶ್ರೋತ್ರವೆಂಬ
ನಾಲ್ಕು ಪಾದವನನಾದಿಮಾಡಿ ನಿಲ್ಲಿಸಿ,
ನಾಲ್ಕು ಪಾದವಂ ನಿಲ್ಲಿಸಿದುದರಿಂದ ನಂದಿಯೆಂಬ ನಾಮವಾಯಿತು.
ಆ ನಂದೀಶ್ವರಂಗೆ ಚಿತ್‌ಶಕ್ತಿಯೆ ಅಂಗ. ಪರಶಕ್ತಿಯೆ ಮುಖ.
ಇಂತಪ್ಪ ನಂದೀಶ್ವರ ನಲಿದಾಡಿ
ಅನಾದಿ ಪರಶಿವ ಅಖಿಲ ಬ್ರಹ್ಮಾಂಡವ ಹೊತ್ತಿಪ್ಪನಲಾಯೆಂದರಿದು
ಆದಿವಾಹನವಾದನು; ಆದೀಗ ಆದಿವೃಷಭನೆಂಬ ನಾಮವಾಯಿತ್ತು
ಆದಿವೃಷಭನ ಆದಿಯಲ್ಲಿ ಪರಶಿವನಿಪ್ಪನು.
ಆ ಪರಶಿವನಾದಿಯಲ್ಲಿ ನಿಃಕಲವಿಪ್ಪುದು,
ಆ ನಿಃಕಲದಾದಿಯಲ್ಲಿ ಸಕಲ ನಿಃಕಲವಿಪ್ಪುದು,
ಆ ಸಕಲ ನಿಃಕಲದಾದಿಯಲ್ಲಿ ಕೇವಲ ಸಕಲವಿಪ್ಪುದು,
ಆ ಸಕಲವೆಂದರೆ ಅನಂತ ತತ್ತ್ವ,
ಬ್ರಹ್ಮಾಂಡ, ಕೋಟ್ಯಾನುಕೋಟಿ ಲೋಕಾಲೋಕಂಗಳು,
ದೇವ ದಾನ ಮಾನವರು,
ಸಚರಾಚರ ಎಂಬತ್ತುನಾಲ್ಕುಲಕ್ಷ ಜೀವಜಂತುಗಳುದ್ಭವಿಸಿದವು.
ಆ ಪಿಂಡಬ್ರಹ್ಮಾಂಡದ ಹೊರೆಯಲ್ಲಿ ಸಕಲ ಪದಾರ್ಥಂಗಳುದ್ಭವಿಸಿದವು.
ಸಕಲ ಪದಾರ್ಥಂಗಳ ಪುಣ್ಯಪಾಪದ ಸಾರವ ಕೈಕೊಂಬುದಕ್ಕೆ
ದೇವನಾವನುಂಟೆಂದು ಆಹ್ವಾನಿಸಿ ನೋಡಲು,
ಆ ನಿಃಕಲ ಮಹಾಲಿಂಗವೆ ಕ್ರಿಯಾಶಕ್ತಿಯ ಮುಖದಲ್ಲಿ
'ಇಷ್ಟಲಿಂಗ'ವಾಗಿ ಬಂದು,
ಜ್ಞಾನಶಕ್ತಿ ಮುಖದಲ್ಲಿ ಸಕಲ ಪದಾರ್ಥಂಗಳ ಕೈಕೊಂಬಲ್ಲಿ,
ಪುಣ್ಯಪಾಪಂಗಳ ಸಾರವಳಿದು ಲಿಂಗಸಾರವಾದ ರೂಪ

# ಅನುಬಂಧ

## ವಚನಗಳ ಅಕಾರಾದಿ

●

## ಅಂಕಿತ–ವಚನಕಾರ–ವಚನಸಂಖ್ಯಾ ವಿವರ :

—ಕೂಡಲಸಂಗಮದೇವ–ಬಸವಣ್ಣ : ೨, ೪, ೬, ೧೨, ೧೬, ೧೭, ೧೮, ೧೯, ೨೦, ೨೧, ೨೨, ೨೩, ೨೪, ೨೫, ೨೬, ೨೭, ೨೮, ೨೯, ೩೦, ೩೧, ೩೨, ೩೩, ೩೪, ೩೫, ೩೬, ೩೭, ೩೮, ೩೯, ೪೦, ೪೧, ೪೨, ೪೩, ೪೪, ೪೫, ೪೬, ೪೭, ೪೮, ೪೯, ೫೦, ೫೧, ೫೨, ೫೩. ೫೪, ೫೫, ೫೬, ೫೭, ೫೮, ೫೯, ೬೦. ೬೧, ೬೨, ೬೩, ೬೪, ೬೫, ೬೬, ೬೭, ೬೮, ೬೯, ೭೦, ೭೧, ೭೨, ೭೩, ೭೪, ೭೫, ೭೬, ೭೭, ೭೮, ೭೯, ೮೦, ೮೧, ೮೨, ೮೩, ೧೧೯, ೧೨೧, ೧೨೬, ೧೨೮, ೧೩೦, ೧೩೯, ೧೪೦, ೧೬೭, ೧೭೧, ೧೭೩, ೧೭೮, ೧೮೫, ೧೮೬, ೧೮೭, ೧೮೯, ೧೯೦, ೧೯೬, ೧೯೭, ೧೯೮, ೨೦೧, ೨೦೨, ೨೦೩, ೨೦೪, ೨೦೫, ೨೧೧, ೨೧೩, ೨೧೪, ೨೧೫, ೨೧೮, ೨೫೫, ೨೫೬, ೨೫೭, ೨೫೮. ೨೫೯, ೨೬೦, ೨೬೧, ೨೬೫, ೨೬೬, ೨೬೭, ೨೬೮, ೨೬೯, ೨೭೧, ೨೭೨, ೨೭೩, ೨೭೪, ೨೭೫, ೨೭೬, ೨೭೭, ೩೦೧, ೩೦೨, ೩೦೩, ೩೦೪, ೩೦೫, ೩೦೬. ೩೦೭, ೩೦೮, ೩೦೯, ೩೧೦, ೩೧೧, ೩೧೨.

—ಗುಹೇಶ್ವರ–ಪ್ರಭುದೇವ : ೧, ೩, ೫, ೭, ೧೪. ೮೪, ೮೫, ೮೬, ೮೭, ೮೯ ೯೦, ೯೧, ೯೨, ೯೩ ೯೪, ೯೫, ೯೮, ೧೦೩, ೧೦೪, ೧೦೫, ೧೦೭, ೧೦೯, ೧೧೨, ೧೧೩, ೧೧೬, ೧೧೭. ೧೧೮, ೧೨೦, ೧೨೨, ೧೨೩, ೧೨೪, ೧೨೭, ೧೨೯, ೧೩೧, ೧೩೩, ೧೪೧, ೧೪೪, ೧೪೬, ೧೪೭, ೧೪೮, ೧೪೯. ೧೫೦, ೧೫೧, ೧೫೨, ೧೫೩, ೧೫೪, ೧೫೫, ೧೫೬, ೧೫೭, ೧೫೮, ೧೫೯, ೧೬೦, ೧೬೧, ೧೬೨, ೧೬೩, ೧೬೪, ೧೭೨, ೧೭೬, ೧೭೯, ೧೮೦, ೧೮೧, ೧೮೨, ೧೮೩, ೧೮೪, ೧೮೮, ೧೯೯, ೨೩೯, ೨೬೨, ೩೧೩.

—ಕೂಡಲಚನ್ನಸಂಗಮದೇವ–ಚನ್ನಬಸವಣ್ಣ : ೮, ೯, ೧೦, ೧೧, ೧೩, ೧೫, ೧೨೫, ೧೭೫, ೧೭೭, ೨೪೦. ೨೪೧, ೨೫೩, ೨೬೩, ೨೬೪, ೨೮೧, ೩೧೬.

—ಚನ್ನಮಲ್ಲಿಕಾರ್ಜುನ–ಮಹಾದೇವಿಯಕ್ಕ : ೯೯, ೧೦೦, ೧೦೧, ೧೦೨, ೧೩೨, ೧೩೪, ೧೩೫, ೧೩೬, ೧೩೭, ೧೩೮, ೧೪೨, ೧೪೩, ೧೪೫, ೨೧೯, ೨೨೦, ೨೨೧, ೨೨೨, ೨೨೩, ೨೨೪, ೨೨೫.

—ಕಪಿಲಸಿದ್ಧಮಲ್ಲಿಕಾರ್ಜುನ–ಸಿದ್ಧರಾಮ : ೧೦೮, ೧೧೦, ೧೧೧, ೧೧೪, ೧೧೫, ೨೫೪, ೨೮೩.

●

## ಆಕರ ಗ್ರಂಥಗಳು


೧) ಸಿಂಗಿರಾಜ ಪುರಾಣ. (ಸಿಂಗಿರಾಜ)
ಸಂ-ಎಚ್. ದೇವೀರಪ್ಪ, ಪ್ರಾಚ್ಯವಿದ್ಯಾ ಸಂಶೋಧನಾಲಯ
ಮೈಸೂರು ವಿಶ್ವವಿದ್ಯಾಲಯ. ಮೈಸೂರು, ೧೯೫೦

೨) ಪ್ರಭುಲಿಂಗಲೀಲೆ. (ಚಾಮರಸ)
ಸಂ-ಡಾ. ಎಂ.ಎಸ್. ಸುಂಕಾಪುರ, ಕನ್ನಡ ಅಧ್ಯಯನಪೀಠ
ಕರ್ನಾಕ ವಿಶ್ವವಿದ್ಯಾಲಯ, ಧಾರವಾಡ, ೧೯೬೭

೩) ಪ್ರಭುಲಿಂಗಲೀಲೆಯ ವಚನಗಳು.
ಕನ್ನಡ ಅಧ್ಯಯನ ಪೀಠ,ಹ. ಪ್ರ. ೧೨೫೭

೪) ಶಿವತತ್ವ ಚಿಂತಾಮಣಿ : (ಲಕ್ಕಣ್ಣ ದಂಡೇಶ)
ಸಂ–ಎಚ್. ದೇವೀರಪ್ಪ ಪ್ರಾಚ್ಯವಿದ್ಯಾ ಸಂಶೋಧನಾಲಯ
ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೬೦

೫) ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ. (ಶಾಂತಲಿಂಗ ದೇಶಿಕ)
(ಭಾಗ-೧,೨)
ಸಂ. ಡಾ. ಆರ್. ಸಿ. ಹಿರೇಮಠ, ಡಾ. ಎಂ. ಎಸ್. ಸುಂಕಾಪೂರ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೪

೬) ಮಹಾದೇವಿಯಕ್ಕನ ಸಾಂಗತ್ಯ. (ರಾಚಯ್ಯ)
ಸಂ. ಡಾ. ಎಸ್. ವಿದ್ಯಾಶಂಕರ.
ತರಳಬಾಳು ಪ್ರಕಾಶನ, ಸಿರಿಗೆರೆ, ೧೯೮೫

೭) ಬೊಮ್ಮಲಿಂಗನ ಕಾವ್ಯ. (ರೇವಣಯ್ಯ ಸ್ವಾಮಿ)
ಡಾ. ಎಂ. ಎಂ. ಕಲಬುರ್ಗಿ, ಮಾರ್ಗ–೧ (ಪು. ೪೨೧)

೮) ಜಂಗಮ ಚಾರಿತ್ರ.
ಕನ್ನಡ ಅಧ್ಯಯನ ಪೀಠ, ಹ.ಪ್ರ. ೨೦೫೩.

೯) ಗುರುಬೋಧಾಮೃತ. (ವಿರತ ಮಹಲಿಂಗದೇವ)
ಸಂ. ಡಿ. ಸಿದ್ಧಲಿಂಗಯ್ಯ, ಪಿ. ಮರಿಬಸವಾರಾಧ್ಯ
ಕನ್ನಡ ಅಧ್ಯಯನ ಸಂಸ್ಥೆ,ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೪

೧೦) ಕುಸ್ತಿ ಆಗಮ.
ಕನ್ನಡ ಅಧ್ಯಯನ ಪೀಠ, (ಹ. ಪ್ರ. ೧೨೫೭)

೧೧) ವೀರಶೈವ ಶಿಖಾರತ್ನ, (ಶಿವ ಸಿದ್ಧರಾಮ)
ಕನ್ನಡ ಅಧ್ಯಯನ ಪೀಠ, ಹ.ಪ್ರ. ೩೧೩೦

೧೨) ಮೇದಾರ ಕೇತಯ್ಯಗಳ ಸಾಂಗತ್ಯ.
ಸಂ-ಎಸ್. ಉಮಾಪತಿ, ದಾವಣಗೆರೆ

೧೩) ಬಸವೇಶ್ವರ ಪುರಾಣದ ಕಥಾಸಾಗರ. (ಉತ್ತರದೇಶದ ಬಸವಲಿಂಗ)
ಸಂ. ಎಸ್. ಉಮಾಪತಿ, ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೭.

೧೪) ಪ್ರಭುಲಿಂಗ ಕಂದ ಟೀಕೆ. (ಮುರುಗಾ ಶಾಂತವೀರ)
ಸಂ-ಎಸ್. ಶಿವಣ್ಣ. ಬೃಹನ್ಮಠ ಚಿತ್ರದುರ್ಗ

೧೫) ಶಿವಾಧಿಕ್ಯಪುರಾಣ. (ಬಸವಲಿಂಗ)
ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ. ಹ. ಪ್ರ. ಕೆ ೬೪೧



## ಸಮಗ್ರ ವೀರಶೈವ ಅಪ್ರಕಟಿತ ಪ್ರಾಚೀನಸಾಹಿತ್ಯ ಪ್ರಕಟನಮಾಲಿ

೧) ವೀರಶೈವ ಅಪ್ರಕಟಿತ ಗ್ರಂಥಸೂಚಿ
೨) ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು
೩) ಚಕ್ಕಣಯ್ಯನ ನಿರಾಳ ಮಂತ್ರಗೌಪ್ಯ
೪) ಕಿಸ್ತೂರದೇವರ ಸ್ವರವಚನಗಳು ೫) ಡಂಗುರ ಪದಗಳು
೬) ಸಿರುಮಣನಾಯಕನ ಸಾಂಗತ್ಯ
೭) ಕೂಡಲೂರ ಬಸವಲಿಂಗ ಶರಣರ ಸ್ವರವಚನಗಳು
೮) ಜಿಗುನಿ ಮರುಳದೇವರ ಕೃತಿಗಳು ೯) ಅದ್ವೈತಶಾಸ[illegible]ಗಳು
೧೦) ಎಳಮಲೆಯ ಗುರುಶಾಂತದೇವರ ವಚನಗಳು
೧೧) ಚನ್ನಬಸವಣ್ಣನವರ ವಚನೈಕೋತ್ತರ ಶತಸ್ಥಲ
೧೨) ಶೀಲ ಸಂಪಾದನೆ ೧೩) ಶರಣ ಚಾರಿತ್ರ್ಯದ ವ[illegible]
೧೪) ಷಟ್‌ಸ್ಥಲ ಬ್ರಹ್ಮಾನಂದ ವಿರಕ್ತ ಚಾರಿತ್ರ್ಯ ಸಂಪಾದ[illegible]ಚನಗಳು
೧೫) ಭಕ್ತ್ಯಾನಂದ ಸುಧಾರ್ಣವ
೧೬) ಶ್ರೀ ಜ. ತೋಂಟದಾರ್ಯ ಸಂ. ಮಠದ ಹಸ್ತಪ್ರತಿ ಸೂಚಿ
೧೭) ಕಂಬಾಳ ಶಾಂತಮಲ್ಲೇಶನ ಗಣವಚನರತ್ನಾವಳಿ
೧೮) ಗುರುಬಸವಾರ್ಯನ ಸ್ವರವಚನಗಳು
೧೯) ಹಾಗಲವಾಡಿ ಮುದ್ವೀರಸ್ವಾಮಿಯ ಸ್ವರವಚನಗಳು
೨೦) ಶಂಕರದೇವರ ಸ್ವರವಚನಗಳು ೨೧) ಷಟ್ಪ್ರಕಾರಸಂಗ್ರಹ
೨೨) ಸೂಕ್ಷ್ಮಮಿಶ್ರಷಟ್‌ಸ್ಥಲ ೨೩) ಮೊಲ್ಲೆಬೊಮ್ಮಯ್ಯಗಳ ಕಾವ್ಯ
೨೪) ಸುಖಸಂಪಾದನೆಯ ವಚನಗಳು ೨೫) ಶಿವಯೋಗ ಚಿಂತಾಮಣಿ
೨೬) ಮರಿಶಾಂತ ಬಸವದೇವರ ಸ್ವರವಚನಗಳು
೨೭) ಎಲ್ಲ ಪುರಾತರ ಸ್ತೋತ್ರದ ವಚನಗಳು ೨೮) ಸಂಪಾದನೆಯ ಸಾರಾಮೃತ
೨೯) ಶರಣಮುಖಮಂಡನ
೩೦) ಸರ್ವಾಚಾರ ಸಾರಾಮೃತ ಸುಧೆ ೩೧) ವಚನಸಾರ
೩೨) ಅನುಭಾವ ಜ್ಞಾನಸಾರಾಮೃತ ಸಂಪಾದನೆಯ ಸ್ತೋತ್ರ
೩೩) ಪ್ರಭುದೇವರ ಷಟ್‌ಸ್ಥಲ ಜಂಗಮಸ್ಥಲ ನಿರ್ದೇಶ
೩೪) ಚೆನ್ನಬಸವಣ್ಣನವರ ಷಟ್‌ಸ್ಥಲವಚನ ಮಹಾಸಂಪುಟ
೩೫) ವಚನ ಸಂಕಲನ ಸಂಪುಟ–೧ ೩೬) ವಚನ ಸಂಕಲನ ಸಂಪುಟ–೨
೩೭) ಕುಷ್ಟಗಿ ಕರಿಬಸವೇಶ್ವರ ವಚನಗಳು
೩೮) ವಚನಸಂಕಲನ ಸಂಪುಟ–೩
೩೯) ಚೆನ್ನಬಸವೇಶ್ವರದೇವರ ಸ್ತೋತ್ರದ ವಚನಗಳು
೪೦) ಏಕೋತ್ತರಶತಸ್ಥಲ ಗೊಲ್ಲಿ
೪೧) ವೀರಶೈವ ಕಾವ್ಯೋಕ್ತ ವಚನಸಂಪುಟ